ಲ. ಸಾ. ಮಾಲೆಯ ೩ನೆಯ ವರುಷದ ೩ನೆಯ ಕುಡಿ

# ಸುಮತಿ ಮತ್ತು ಅನುರಾಧಾ

ಶರಚ್ಚಂದ್ರರ ಎರಡು ನೀಳ್ಗತೆ

●

ಅನುವಾದಿಕೆ:

ಶ್ರೀಮತಿ ಎಂ. ಎ. ಕುಪ್ಪಮ್ಮ, ಬೆಂಗಳೂರು

ಅನುವಾದಕ:

ಶ್ರೀ. ಗುರುನಾಥ ಜೋಶಿ, ಧಾರವಾಡ

●

[redacted]ಲಿತ ಸಾಹಿತ್ಯ ಮಾಲೆ

— ಧಾರವಾಡ —

ಏಪ್ರಿಲ್ ೧೯೪೪ ಬೆಲೆ: ೧-೪-೦

# ಸಂಪಾದಕರ ಮಾತು

ಲ. ಸಾ. ಮಾಲೆಯು ತನ್ನ ಕುಡಿಯನ್ನು ಚಾಚುತ್ತ ಈಗ ೨ನೆಯ ವರುಷದ ೨ನೆಯ ಕುಡಿಯನ್ನು ಪ್ರಕಟಗೊಳಿಸಿದೆ. ೩ನೆಯ ಕುಡಿಯಾದ “ಡೊಂಕುಬಾಲ”ವೂ ಬೇಗನೆ ವಾಚಕರ ಕೈಸೇರುವುದೆಂದು ಆಶಿಸುತ್ತೇವೆ.

ಶರಚ್ಚಂದ್ರರ ಕಾದಂಬರಿಗಳು ಕನ್ನಡದಲ್ಲಿ ಒಂದರ ಮೇಲೊಂದು ಪ್ರಕಟವಾಗತೊಡಗಿವೆ. ಹೊಸ ಹೊಸ ಅನುವಾದಕರೂ ತಲೆಯೆತ್ತಿರುವರು. ಹೀಗಾಗಿ ಶರಚ್ಚಂದ್ರರ ಸಮಗ್ರ ಸಾಹಿತ್ಯವು ಕನ್ನಡದಲ್ಲಿ ಬೇಗನೆ ದೊರೆಯುವ ಸುಯೋಗ ಒದಗಿ ಬಂದಿದೆಯೆನಬಹುದು. ವಿಶ್ವವಿಖ್ಯಾತಿಯಾದ ಶರಚ್ಚಂದ್ರರ ಕಾದಂಬರಿ, ಕತೆಗಳ ಬಣ್ಣನೆ ಎಷ್ಟು ಮಾಡಿದರೂ ಕಡಿಮೆಯೆ ಸರಿ.

ಇಲ್ಲಿ ಅವರ ಎರಡು ನೀಳ್ಗತೆಗಳನ್ನು ಕೊಡಲಾಗಿದೆ. “ಅಕ್ಕಾಜಿ”ಯಷ್ಟೆ ಪ್ರಸಿದ್ಧವಾದ “ಸುಮತಿ”ಯನ್ನು ಶ್ರೀಮತಿ ಎಂ. ಎ. ಕುಪ್ಪಮ್ಮ, ಬೆಂಗಳೂರು ಇವರು ಅನುವಾದಿಸಿದ್ದಾರೆ ಇವರ ಅನುವಾದದ ಶೈಲಿ ಸರಗಗಳವಾಗಿ ಸಾಗಿದೆ; ಕಥೆಯು ಓಟವೂ ಅಂತಹುದೆ. ಅಂತಲೆ ಇವರ ಶೈಲಿಯ ನಾವೀನ್ಯತೆಯನ್ನು ವಾಚಕರು ಬೇರೆ ಅನುವಾದಗಳೊಡನೆ ಹೋಲಿಸಿ ನೋಡಿದರೆ ಕಂಡುಬರುವಂತಿದೆ. ಎರಡನೆಯದಾದ “ಅನುರಾಧಾ” ಎಂಬದನ್ನು ಶರಚ್ಚಂದ್ರರ ಅನುವಾದವಾರಂಭಿಸಿ ಉತ್ತರಕರ್ನಾಟಕದವರಿಗೆ ಅವರ ಕೃತಿಗಳ ಸವಿ ಹಚ್ಚಿದವರಾದ ಶ್ರೀ. ಗುರುನಾಥ ಜೋಶಿ ಅವರು ಅನುವಾದಿಸಿದ್ದಾರೆ. ನಮ್ಮ ಬಿನ್ನಹದ ಮೇರೆಗೆ ಸ್ನೇಹಿತ ಗುರುನಾಥ ಜೋಶಿಯವರು ತಮ್ಮ ಕೃತಿಯನ್ನೂ ಶ್ರೀಮತಿ ಕುಪ್ಪಮ್ಮನವರ ಕೃತಿಯನ್ನೂ ಪ್ರಕಟಿಸಲು ನಮಗೆ ದಯಪಾಲಿಸಿದುದಕ್ಕಾಗಿ ನಾವು ಅವರಿಗೆ ಉಪಕೃತರಾಗಿರುವೆವು.

ಗೋವಿಂದ ವೆಂ. ಚುಳಕಿ

ರಾಮುಲಾಲನ ವಯಸ್ಸು ಚಿಕ್ಕದು. ಆದರೂ ಅವನ ದುಷ್ಟ ಬುದ್ಧಿ ಮಾತ್ರ ಕಡಿಮೆಯಿರಲಿಲ್ಲ. ಊರ ಜನರೆಲ್ಲರೂ ಅವನಿಗೆ ಹೆದರುತ್ತಿದ್ದರು. ಯಾವಾಗ, ಯಾವ ಹೊತ್ತಿನಲ್ಲಿ, ಯಾವ ರೂಪದಿಂದ ಬಂದು ಯಾರಿಗೆ ತೊಂದರೆ ಕೊಡುವನೋ—ಎಂಬುದನ್ನು ಊಹಿಸುವುದು ಸಹ ಕಷ್ಟವಾಗಿತ್ತು. ಅವನ ಅಣ್ಣ (ಮಲತಾಯಿಯ ಮಗ) ಶಾಮುಲಾಲನೂ ಅಷ್ಟೇನು ಶಾಂತ ಪ್ರಕೃತಿಯ ಮನುಷ್ಯನಲ್ಲ; ಆದರೂ ಸಣ್ಣ ಅಪರಾಧಕ್ಕೆ ಭಾರಿಯ ಶಿಕ್ಷೆಯನ್ನು ಕೊಡುವ ಮನುಷ್ಯನಾಗಿರಲಿಲ್ಲವೆಂದು ಹೇಳಬಹುದು. ಆ ಗ್ರಾಮದ ಜಮೀನುದಾರನ ಬಳಿ ಅವನು ಕೆಲಸ ಮಾಡುತ್ತಿದ್ದ. ಅಲ್ಲದೆ ತನ್ನ ಸ್ವಂತ ಜಮೀನು-ಆಸ್ತಿಗಳನ್ನೂ ನೋಡಿಕೊಳ್ಳುತ್ತಿದ್ದ. ಮನೆಯ ಸ್ಥಿತಿಗತಿ ಮತ್ತು ಅನುಕೂಲತೆಗಳು ಚೆನ್ನಾಗಿದ್ದುವು. ಭಾವಿ, ತೋಟ, ಹೊಲ ಎಲ್ಲವೂ ಇದ್ದುವು. ಅಲ್ಲದೆ ಹತ್ತಿಪ್ಪತ್ತು ಮನೆಯ ಬಾಗ್ದೀ* ಪ್ರಜೆಗಳು ಸಹ ಅವನ ಕೈಕೆಳಗಿದ್ದರು. ಸ್ವಲ್ಪ ನಗದು ರೂಪಾಯಿಗಳನ್ನೂ ಇಟ್ಟಿದ್ದ. ಶಾಮುಲಾಲನ ಪತ್ನಿ ನಾರಾಯಣಿಯು ಮೊಟ್ಟ ಮೊದಲು ಆ ಮನೆಗೆ ಬಂದಾಗ—ಅಂದರೆ ಸುಮಾರು ಹದಿಮೂರು ವರ್ಷಗಳ ಮಾತು—ಅದೇ ವರ್ಷ ರಾಮನ ವಿಧವೆ ಮಾತೆಯು ಮೃತಿಯನ್ನೈದಿದಳು. ಸಾಯುವ ಸಮಯದಲ್ಲಿ ಅವಳು ತನ್ನ ಸಂಸಾರದ ಎಲ್ಲ ಹೊಣೆಯನ್ನೂ ಮತ್ತು ಎರಡೂವರೆ ವರ್ಷ ವಯಸ್ಸಿನ ಹಾಲು ಕುಡಿಯ[illegible] ಬಾಲಕನಾದ ರಾಮನನ್ನೂ ತನ್ನ ಹದಿಮೂರು ವರ್ಷದ ಸೊಸೆ ನಾರಾಯಣಿಯ ವಶಕ್ಕೊಪ್ಪಿಸಿ ಹೋದಳು.

ಆ ವರ್ಷ ಊರಲ್ಲೆಲ್ಲಾ ಎತ್ತ ನೋಡಿದರೂ ಜ್ವರದ ಗಲಾಟೆ. ನಾರಾಯಣಿಗೂ ಜ್ವರ ಬಂದಿತು. ಅಲ್ಲಿ, ಸುತ್ತು-ಮುತ್ತಲಿನ ಮೂರು-ನಾಲ್ಕು

---

* ಇವರು ಬಂಗಾಲ ದೇಶದ ಒಂದು ನೀಚ ಜಾತಿಯವರು. ಮೀನು ಹಿಡಿಯುವುದು, ಹೊಲ-ತೋಟಗಳನ್ನು ನೋಡಿಕೊಳ್ಳುವುದು ಇವೇ ಇವರ ಕೆಲಸ. ಅಲ್ಲದೆ ಇವರು ಜಗಳ-ಕದನಗಳಲ್ಲಿ ಹೆಸರುವಾಸಿಯಾದವರು.

ಗ್ರಾಮಗಳಿಗೂ ಇದ್ದ ಡಾಕ್ಟರೆಂದರೆ ನೀಲಮಣಿ ಬಾಬುಗಳೊಬ್ಬರೇ! ಅದೂ ಅರ್ಥಮರ್ಥ ತಿಳಿದವರು—ಪೂರ್ತಿ ಪರೀಕ್ಷೆ ಸಹ ಪಾಸಾಗಿರಲಿಲ್ಲ. ಅಷ್ಟಾದರೂ ಅವರ ಫೀಸ್ ಈ ದಿನಗಳಲ್ಲಿ ಒಂದಕ್ಕೆರಡಾಗಿತ್ತು. ಅಲ್ಲದೆ ಅವರು ಕೊಡುತ್ತಿದ್ದ ಕ್ವಿನೈನ್ ಪುಡಿಯಲ್ಲಿ ಅರರೋಟ್ ಮೈದಾ ಹಿಟ್ಟುಗಳ ಬೆರಕೆ ಇರುತ್ತಿದ್ದುವು. ಏಳು ದಿನಗಳು ಕಳೆದರೂ ನಾರಾಯಣಿಯ ಜ್ವರ ಸ್ವಲ್ಪವೂ ಇಳಿಯಲಿಲ್ಲ. ಶಾಮಲಾಲನ ಮನಸ್ಸು ಬಹಳ ಚಿಂತೆಗೀಡಾಯಿತು.

ಡಾಕ್ಟರನ್ನು ಕರೆತರುವುದಕ್ಕೆಂದು ಹೋಗಿದ್ದ ಆಳುಮಗಳಾದ ನೃತ್ಯಕಾಳಿಯು ಪೆಚ್ಚು ಮೋರೆ ಹಾಕಿಕೊಂಡು ಹಿಂತಿರುಗಿ ಬಂದಳು.

"ಡಾಕ್ಟರ್ ಸಾಹೇಬರು ಈ ದಿನ ಬೇರೆ ಗ್ರಾಮಕ್ಕೆ ಹೋಗುವರಂತೆ; ನಾಲ್ಕು ರೂಪಾಯಿ ಫೀಸಂತೆ; ಆದ್ದರಿಂದ ಅಲ್ಲಿಗೆ ಬರಲಾಗುವುದಿಲ್ಲವೆಂದು ಹೇಳಿದರು" ಎಂದಳು.

ಶಾಮಲಾಲನಿಗೆ ಬಹಳ ಕೋಪವುಂಟಾಯಿತು. "ಛೀ, ಪಾಪಿ! ಅದೇ ನಾಲ್ಕು ರೂಪಾಯಿಗಳನ್ನು ನಾವು ಕೊಡುತ್ತಿರಲಿಲ್ಲವೇ? ರೂಪಾಯಿ ಪ್ರಾಣಕ್ಕಿಂತ ಹೆಚ್ಚಿನ ವಸ್ತುವೇ? ಹೋಗು! ಅವರನ್ನು ಕರೆದುಕೊಂಡು ಬಾ!" ಎಂದು ನೃತ್ಯಕಾಳಿಯನ್ನು ಪುನಃ ಕಳುಹಿಸಿದ.

ನಾರಾಯಣಿಯು ಕೊಠಡಿಯೊಳಗಿಂದಲೇ ಎಲ್ಲವನ್ನೂ ಕೇಳುತ್ತಿದ್ದಳು. ನಿಶ್ಶಕ್ತ ಕಂಪಿತ ಧ್ವನಿಯಿಂದ ಅವಳೆಂದಳು: ನಾನು ಹೇಳುವುದನ್ನು ಸ್ವಲ್ಪ ಕೇಳಿರಿ. ನೀವು ಇಷ್ಟೊಂದು ಗಾಬರಿಗೊಳ್ಳಲೇಕೆ? ಡಾಕ್ಟರ್ ಸಾಹೇಬರು ಈ ದಿನವಲ್ಲದಿದ್ದರೆ ನಾಳೆ ಬರಲಿ! ಒಂದು ದಿವಸದಲ್ಲಿ ಏನು ಕೆಟ್ಟುಹೋಗುವುದು?

ಅಂಗಳದ ಒಂದು ಮೂಲೆಯಲ್ಲಿ, ಸೀಬೆಯ ಮರದಡಿ ಕುಳಿತು ಗಿಣಿಯ ಪಂಜರವನ್ನು ಕಟ್ಟುತ್ತಿದ್ದ ರಾಮಲಾಲನು ಇದೆಲ್ಲವನ್ನೂ ಕೇಳಿ, ಎದ್ದು ಬಂದು "ದಾಸೀ! ನೀನು ಹೋಗಬೇಡ, ನಾನೇ ಹೋಗುವೆನು!" ಎಂದ.

ಮೈದುನ ರಾಮಲಾಲನ ಧ್ವನಿಯನ್ನು ಕೇಳಿದೊಡನೆಯೇ ನಾರಾಯಣಿಯು ಗಾಬರಿಗೊಂಡು ಎದ್ದುಕುಳಿತಳು. "ಇಲ್ಲಿ ಕೇಳಿ! ರಾಮನನ್ನು ತಡೆಯಿರಿ! ಓ ರಾಮಾ! ನನ್ನ ಮೇಲಾಣೆ—ನೀನು ಹೋಗಬೇಡ, ತಮ್ಮಾ!

ಅಲ್ಲಿ ಹೋಗಿ ನೀನು ಅವರ ಸಂಗಡ ಜಗಳವಾಡಿಬಿಡುವೆ!" ಎಂದು ಕೂಗಿಕೊಂಡಳು.

ರಾಮುಲಾಲನು ಕೇಳಿಸಿದರೂ ಕೇಳಿಸದವನಂತೆ ಹೊರಟೇ ಬಿಟ್ಟ! ಪಂಜರ ಕಟ್ಟಲು ಸಹಾಯ ಮಾಡುತ್ತ ದೆಬ್ಬೆಗಳನ್ನು ಕೈಯಲ್ಲಿ ಹಿಡಿದು ಕುಳಿತಿದ್ದ ಗೋವಿಂದನು–ಗೋವಿಂದ ಶಾಮುಲಾಲನ ಐದು ವರ್ಷದ ಮಗ—ಎದ್ದು ನಿಂತು ಕೂಗಿಕೊಂಡ:—ಚಿಕ್ಕಪ್ಪಾ! ಪಂಜರ ಕಟ್ಟಿಕೊಡುವುದಿಲ್ಲವೇ?

"ಕಟ್ಟಿಕೊಡುವೆನು, ಇದೋ ಬಂದೆ!" ಎನ್ನುತ್ತ ರಾಮು ಹೊರಟೇ ಹೋದ.

ನಾರಾಯಣಿಯು ಸೊಂಟವನ್ನೊತ್ತಿಕೊಳ್ಳುತ್ತ, ಅಳುವ ಧ್ವನಿಯಿಂದ ಪತಿಯನ್ನು ಕರೆದು ಹೇಳಿದಳು: ಅವನನ್ನೇಕೆ ಹೋಗಗೊಟ್ಟಿರಿ? ಇನ್ನು ಅಲ್ಲಿ ಹೋಗಿ ಏನೇನು ಉಪದ್ರವ ಮಾಡಿ ಬರುವನೋ!

ಶಾಮುಲಾಲನು ಮೊದಲೇ ಸಿಟ್ಟುಗೊಂಡಿದ್ದ. ಈಗ ಮತ್ತಿಷ್ಟು ಕೆರಳಿ ಉತ್ತರವಿತ್ತ: ನಾನೇನು ಮಾಡಲಿ? ನಿನ್ನ ಮಾತನ್ನೇ ಅವನು ಕೇಳಲಿಲ್ಲ. ಹೀಗಿರುವಲ್ಲಿ ನಾನು ಹೇಳಿದರೆ ಹೋಗದೆ ನಿಲ್ಲುವನೇ?

"ಕೈಹಿಡಿದು ನಿಲ್ಲಿಸಿಕೊಳ್ಳಲಿಲ್ಲವೇಕೆ? ಈ ಹಾಳು ಮುಂಡೇದರಿಂದ ಒಂದು ಗಳಿಗೆಯೂ ನನ್ನ ಮನಸಿಗೆ ಶಾಂತಿಯಿಲ್ಲ! ನನಗೆ ಸಾವಾದರೂ ಏಕೆ ಬರಲೊಲ್ಲದು,? ನಿತ್ರೋ* ಹೋಗಿ ಭೋಲನನ್ನು ಕಳುಹಿಸು, ರಾಮನನ್ನು ಒಳ್ಳೆಯ ಮಾತು ಹೇಳಿ ಹಿಂದಕ್ಕೆ ಕರೆತರುವಂತೆ ಹೇಳು. ಅವನು ಇನ್ನೂ ಆ ಮಾರ್ಗದ ಮೂಲೆಯ ವರೆಗೆ ಸಹ ಹೋಗಿರಲಾರ!

ನೃತ್ಯಕಾಳಿಯು ಭೋಲನನ್ನು ಹುಡುಕುತ್ತ ಹೊರಟಳು.

ಇತ್ತ ರಾಮನು ನೀಲಮಣಿ ಡಾಕ್ಟರರ ಮನೆಯನ್ನು ತಲಪಿದ. ಡಾಕ್ಟರು ತಮ್ಮ ಆಸ್ಪತ್ರೆಯಲ್ಲಿ ಕುಳಿತುಕೊಂಡಿದ್ದರು—ಒಂದೆರಡು ಪುಟ್ಟ ಅಲಮಾರುಗಳು; ಚಿಕ್ಕದೊಂದು ಮೇಜು ಮತ್ತು ಕುರ್ಚಿ—ಕುರ್ಚಿಯ ಮೇಲೆ ಕುಳಿತು, ಚಿಕ್ಕ ತ್ರಾಸಿನಿಂದ ಔಷಧಿಗಳನ್ನು ತೂಕ ಮಾಡುತ್ತಿದ್ದರು. ನಾಲ್ಕಾರು ರೋಗಿಗಳು ಮುಂದೆ ಕುಳಿತು, ಅದನ್ನೇ ನೆಟ್ಟ ದೃಷ್ಟಿಯಿಂದ ನೋಡುತ್ತಿದ್ದರು.

* ನೃತ್ಯಕಾಳಿಯನ್ನು ಈ ಹೆಸರಿನಿಂದಲೇ ಕರೆಯುವುದು ಅವರ ಮನೆಯಲ್ಲಿ ವಾಡಿಕೆಯಾಗಿತ್ತು. ಇವಳು ಅವರ ಮನೆಯ ಬಹಳ ಹಿಂದಿನ ದಾಸಿ.

ಡಾಕ್ಟರು ಒಮ್ಮೆ ವಕ್ರದೃಷ್ಟಿಯಿಂದ ರಾಮನ ಕಡೆ ನೋಡಿ, ಪುನಃ ತಮ್ಮ ಕೆಲಸದಲ್ಲಿ ತೊಡಗಿದರು.

ರಾಮ ಒಂದು ಕ್ಷಣ ಸುಮ್ಮನಿದ್ದು, ನಂತರ ಹೇಳಿದ: ಅತ್ತಿಗೆಯ ಜ್ವರ ಏಕೆ ಗುಣವಾಗಲೊಲ್ಲದು ?

ಡಾಕ್ಟರು ತ್ರಾಸಿನಿಂದ ದೃಷ್ಟಿಯನ್ನು ಅತ್ತಿತ್ತ ಕದಲಿಸದೆ, ಹಾಗೆಯೇ ಹೇಳಿದರು : ಅದಕ್ಕೆ ನಾನೇನು ಮಾಡಲಿ? ಔಷಧಿಯನ್ನು ಕೊಡುತ್ತಿಲ್ಲವೋ ?

"ಏನು ಕೊಡುತ್ತಿರುವಿರಿ, ಮಣ್ಣು! ಹಳೆಯ ಮೈದಾಹಿಟ್ಟಿನ ಪೊಟ್ಟಣಗಳಿಂದ ಜ್ವರವು ನಿಲ್ಲುವುದೇ ?"

ಈ ಮಾತನ್ನು ಕೇಳುತ್ತಲೇ ಡಾಕ್ಟರ್ ಸಾಹೇಬರ ಮುಖವು ಕೋಪದಿಂದ ಕೆಂಪೇರಿತು. ತ್ರಾಸು, ಬಟ್ಟು, ಔಷಧಿ ಎಲ್ಲವನ್ನೂ ಒತ್ತಟ್ಟಿಗಿಟ್ಟು, ಕಣ್ಣುಗಳನ್ನು ಕೆರಳಿಸಿಕೊಂಡು ರಾಮನನ್ನೇ ದುರದುರನೆ ನೋಡತೊಡಗಿದರು. ತಮ್ಮೆದುರಿಗೇ ಇಷ್ಟು ಅಹಂಕಾರದ ಮಾತನ್ನಾಡುವ ಸಾಹಸವೂ ಇವರಿಗುಂಟಾಯಿತೇ—ಎಂದು ಡಾಕ್ಟರರು ಆಶ್ಚರ್ಯಚಕಿತರಾದರು.

ಕ್ಷಣಕಾಲ ಸುಮ್ಮನಿದ್ದು ನಂತರ ಅವರು ಗರ್ಜಿಸಿ ಹೇಳಿದರು : ಹಳೆಯ ಮೈದಾಹಿಟ್ಟಂತೆ!! ಹಾಗಿದ್ದರೆ ಅದನ್ನು ತೆಗೆದುಕೊಳ್ಳಲಿಕ್ಕೆ ಏಕೆ ಬಂದೆ? ನನ್ನ ಕಾಲಿಗೆ ಬಿದ್ದು ನನ್ನನ್ನು ಕರೆತರುವಂತೆ ನಿಮ್ಮಣ್ಣನು ನಿನ್ನನ್ನು ಏಕೆ ಕಳುಹಿಸುವನೋ ?

"ಈ ಊರಿನಲ್ಲಿ ಮತ್ತಾರೂ ಡಾಕ್ಟರು ಇಲ್ಲದಿರುವುದರಿಂದ ನಿಮ್ಮನ್ನು ಕರೆತರಲು ಕಳುಹಿಸಿರುವರು. ಇದ್ದಿದ್ದರೆ ನಿಮ್ಮಲ್ಲಿಗೆ ಕಳುಹಿಸುತ್ತಲೇ ಇರಲಿಲ್ಲ" ಎಂದ ರಾಮ.

ಕೊಠಡಿಯಲ್ಲಿದ್ದ ರೋಗಿಗಳೆಲ್ಲರೂ ಇವನ ಮಾತನ್ನು ಕೇಳಿ ಚಕಿತರಾಗಿ, ಅವಾಕ್ಕಾದರು. ಅಷ್ಟರಲ್ಲಿ ರಾಮನು ಪುನಃ ಡಾಕ್ಟರ ಕಡೆ ದಿಟ್ಟಿಸಿ, ಹೇಳತೊಡಗಿದ: ನೀವು ನೀಚಜಾತಿಯವರು; ಆದ್ದರಿಂದಲೇ 'ಕಾಲಿಗೆ ಬೀಳುವುದು' ಎಂದು ಮುಂತಾಗಿ ನೀಚ ವಾಕ್ಯಗಳನ್ನಾಡಿದಿರಿ! ಅಣ್ಣನವರು ಯಾರ ಕಾಲಿಗೂ ಬೀಳುವುದಿಲ್ಲ! ನಾನು ಬರುವಾಗ ಅತ್ತಿಗೆಯು ತನ್ನ ಮೇಲೆ ಆಣೆ ಇಟ್ಟುಕೊಂಡಿದ್ದಳು. ಇಲ್ಲದಿದ್ದರೆ ನಿಮ್ಮ ಹಲ್ಲುಗಳನ್ನು ಉದು

ರಿಸಿಬಿಡುತ್ತಿದ್ದೆ ! ಅದಿರಲಿ, ಈಗ ನಾನು ಹೇಳುವುದನ್ನು ಕೇಳಿರಿ ಒಳ್ಳೆಯ ಔಷಧಿಯನ್ನು ತೆಗೆದುಕೊಂಡು, ಹೊತ್ತು ಮಾಡದೆ ಹೊರಡಿರಿ ! ಈವೊತ್ತು ನಾಳೆಯೊಳಗೆ ಅತ್ತಿಗೆಯ ಜ್ವರ ಗುಣವಾಗದಿದ್ದರೆ—ಅದೋ ! ಅಲ್ಲಿ ಎದುರಿಗೆ ಬೆಳೆದಿರುವ ಮಾವಿನ ಸಸಿಗಳು--ಇನ್ನೂ ದೊಡ್ಡದಾಗಲು ಸಹ ಮಾರ್ಗ ವಿಲ್ಲ—ಅವುಗಳಲ್ಲಿ ಒಂದೂ ಉಳಿಯದಂತೆ ನಾಳೆಯೇ ಸಂಪೂರ್ಣ ಮಾಡಿ ಬಿಡುವೆನು. ಮತ್ತು ನಿಮ್ಮ ಈ ಗಾಜು ಸೀಸೆಗಳನ್ನೆಲ್ಲ ಚೂರು-ಚೂರು ಮಾಡಿ ಬಿಸುಟಬಿಡುವೆನು !!

ಇಷ್ಟು ಮಾತನಾಡಿ, ಮರುಕ್ಷಣವೂ ಅಲ್ಲಿ ನಿಲ್ಲದೆ ರಾಮನು ಕಾಲಿಗೆ ಬುದ್ಧಿ ಹೇಳಿದ.

ಡಾಕ್ಟರು ಕೈಯಲ್ಲಿ ತ್ರಾಸನ್ನು ಹಿಡಿದು ಸುಮ್ಮನೆ ಕುಳಿತುಬಿಟ್ಟರು.

ಅಲ್ಲಿದ್ದ ರೋಗಿಗಳ ಪೈಕಿ ಒಬ್ಬ ವೃದ್ಧನು ಸ್ವಲ್ಪ ಧೈರ್ಯ ತೆಗೆದು ಕೊಂಡು ಹೇಳಿದ: ಡಾಕ್ಟರ್ ಸಾಹೇಬ್ ! ತಾವಿನ್ನು ತಡಮಾಡಬಾರದು. ಒಳಗೆ ಯಾವುದಾದರೂ ಒಳ್ಳೆಯ ಔಷಧಿ ಇಟ್ಟಿದ್ದ ಪಕ್ಷದಲ್ಲಿ ಅದನ್ನು ತೆಗೆದು ಕೊಂಡು ತಕ್ಷಣ ಹೊರಡಿರಿ ! ಅವನ ಹೆಸರು ರಾಮ ! ಹೇಳಿದ್ದನ್ನು ಮಾಡಿಯೇ ಬಿಡುವನು !

ಡಾಕ್ಟರು ತ್ರಾಸನ್ನು ಕೆಳಗಿಟ್ಟು ಹೇಳಿದರು: ಈ ಕ್ಷಣವೇ ಪೋಲೀಸ್ ಠಾಣೆಗೆ ಹೋಗಿ ಎಲ್ಲವನ್ನೂ ತಿಳಿಸುವೆನು. ನೀವೆಲ್ಲರೂ ಸಾಕ್ಷಿ ಇರುವಿರಿ !

ಮುದುಕನೆಂದ: ಸಾಕ್ಷಿ! ಸಾಕ್ಷಿ ಯಾರು ಹೇಳುವರು, ಡಾಕ್ಟರ್ ಬಾಬೂ ! ಕ್ವಿನೈನ್ ಸೇವನೆ ಮಾಡಿ ಮಾಡಿ, ನನ್ನ ಕಿವಿಗಳೇ ಸರಿಯಾಗಿ ಕೇಳಿಸುವುದಿಲ್ಲ—ರಾಮಲಾಲರು ಏನು ಹೇಳಿದರೆಂಬುದೇ ನನಗೆ ಕೇಳಿಸಲಿಲ್ಲ. ಅದಿರಲಿ ! ಪೋಲೀಸಿನವರು ಮಾಡುವವರಾದರೂ ಏನು ? ರಾಮಲಾಲರ ಮೂರ್ತಿ ಚಿಕ್ಕದಾದರೂ, ಅವರ ಸಂಗಡಿಗರ ಪುಂಡು ಗುಂಪು ಮಾತ್ರ ಚಿಕ್ಕದಾಗಿಲ್ಲ ! ನಿಮ್ಮನ್ನೇ ಮನೆಯೊಳಗೆ ಸೇರಿಸಿ, ಮನೆಗೇ ಬೆಂಕಿ ಹೊತ್ತಿಸಿ ಬಿಟ್ಟರೂ, ಪೋಲೀಸಿನವರು ಬಂದು ವಿಚಾರಿಸುವುದಿಲ್ಲ ! ಬೇಕಿದ್ದರೆ, ಉರಿ ಯುತ್ತಿರುವ ಬೆಂಕಿಗೆ ಮತ್ತೊಂದು ಹಿಡಿ ಹುಲ್ಲನ್ನು ಹಾಕುವರು. ನಾವು ಸಾಕ್ಷಿ-ಗೀಕ್ಷಿ ಹೇಳಲಾರೆವು, ಬಾಬೂ! ರಾಮಲಾಲರನ್ನು ಕಂಡರೆ ಎಲ್ಲರೂ

ಹೆದರುವರು. ಆದ್ದರಿಂದ ಅವರು ಹೇಳಿ ಹೋದಂತೆ ನೀವು ನಡೆದ
ನೆಮ್ಮದಿ!—ಡಾಕ್ಟರ್ ಬಾಬೂ, ಸ್ವಲ್ಪ ನನ್ನ ನಾಡಿಯನ್ನು ಪರೀಕ್ಷಿಸಿ ನೋಡಿ
ಈವೊತ್ತು ಏನಾದರೂ ಸ್ವಲ್ಪ ಊಟ ಮಾಡಲೋ ?

ಡಾಕ್ಟರ ಮನಸ್ಸು ಒಳಗಿಂದೊಳಗೇ ಸಿಟ್ಟಿನಿಂದ ಉರಿಯುತ್ತಿತ್ತು
ವೃದ್ಧನ ನಾಡಿ ನೋಡುವ ಪ್ರಸ್ತಾಪದಿಂದ ಮತ್ತಷ್ಟು ಕೆರಳಿತು. "ಸಾ
ಹೇಳಿರೆಂದರೆ ಸಾಯುತ್ತೀರಿ! ನಡೆಯಿರಿ, ಇಲ್ಲಿಂದ ಹೊರಡಿರಿ! ನಾನು ಯಾ
ನಾಡಿಯನ್ನೂ ನೋಡುವುದಿಲ್ಲ! ಸಾಯುತ್ತಿದ್ದರೆ ಸಹ ನಿಮ್ಮಗಳಿಗೆ ಔಷ
ಕೊಡುವುದಿಲ್ಲ—ನೋಡುವೆನು ಆಗ ನಿಮ್ಮೆಲ್ಲರ ಗತಿ ಏನಾಗುವುದೆಂದು!

ವೃದ್ಧನು ಕೋಲೂರಿಕೊಂಡು ಎದ್ದು ನಿಂತು ಪುನಃ ಹೇಳಿದ
ಡಾಕ್ಟರ್ ಬಾಬೂ! ನಿಮಗಿನ್ನೂ ಅವನ ವಿಷಯ ಚನ್ನಾಗಿ ಗೊತ್ತಿಲ್ಲ
ಅವನ ಗುಂಪಿನವರು ಅಸಾಧ್ಯ ಪುಂಡರು! ಅದಿರಲಿ, ಈಗ ನಾವು ಅವ
ಬಳಿ ಹೋಗಿ, ಇಲ್ಲಿ ನಡೆದ ವಿಷಯವನ್ನೆಲ್ಲ ವಿವರಿಸಬೇಕು. ಇಲ್ಲದಿದ್ದ
ನಾವೇ ನಿಮಗೆ ಪೋಲೀಸ್ ಠಾಣೆಗೆ ಹೋಗಲು ಸಲಹೆ ಕೊಟ್ಟವರೆಂದು ತಿಳಿದ
ನಮ್ಮನ್ನು ಸುಮ್ಮನೆ ಬಿಟ್ಟಾರೇ ? ಮನೆಯ ತೋಟದ ತುಂಬಾ ಬದನೆಯನ್ನು
ಬೆಳೆದಿರುವೆನು—ರಾತ್ರಿಗೇ ಬಂದು ಎಲ್ಲವನ್ನೂ ಧ್ವಂಸ ಮಾಡಿ ಬಿಡುವರು
ಡಾಕ್ಟರ್ ಬಾಬೂ, ನೀವು ಪೋಲೀಸ್ ಠಾಣೆಗೆ ಹೋಗುವುದು ಹಾಗಿರಲಿ
ಒಂದು ಸೀಸೆ ಉತ್ತಮವಾದ ಔಷಧಿಯನ್ನು ತೆಗೆದುಕೊಂಡು ಹೋಗಿ, ಕೊಟ್ಟು
ಅವರ ಮನಸ್ಸನ್ನು ಸ್ವಲ್ಪ ಶಾಂತಗೊಳಿಸಿ ಬನ್ನಿ!

ಹೀಗೆಂದು ಹೇಳಿ ವೃದ್ಧನು ಅಲ್ಲಿಂದ ಹೊರಟ. ಬಾಕಿಯ ರೋಗಿಗಳ
ಮೆಲ್ಲನೆ ಒಬ್ಬೊಬ್ಬರಾಗಿ ಮನೆಯ ಹಾದಿ ಹಿಡಿದರು. ನೀಲಮಣಿ ಬಾಬುಗಳ
ಒಮ್ಮೆ ನಿಟ್ಟುಸಿರು ಬಿಟ್ಟು, 'ಈ ಪ್ರಪಂಚದಲ್ಲಿ ಯಾವನಿಗೂ ಒಳ್ಳೆಯದನ
ಮಾಡಬಾರದು' ಎಂದು ಶಪಿಸಿಕೊಳ್ಳುತ್ತ ಮನೆಯೊಳಹೊಕ್ಕರು.

ನಾರಾಯಣಿಯು ಕಿಟಕಿಯಿಂದ ಹೊರಗಡೆಯೇ ನೋಡುತ್ತ, ರಾಮ
ವಿಷಯವಾಗಿ ತವಕಿಸುತ್ತಿದ್ದಳು. ಅಷ್ಟರಲ್ಲಿ ರಾಮನು ಹಿಂತಿರುಗಿ ಬಂದ.

"ಗೋವಿಂದ! ನಡೆ, ಪಂಜರ ಕಟ್ಟೋಣ!"

"ಓ ರಾಮಾ! ಸ್ವಲ್ಪ ಇಲ್ಲಿ ಬಂದು ಹೋಗು!" ಎಂದು ಕೂಗಿದಳ
ನಾರಾಯಣಿ.

ರಾಮನು ಕಿಟಕಿಯ ಕಿಂಡಿಗಳಿಂದ ಒಮ್ಮೆ ಇಣಿಕಿ ನೋಡಿ "ಸ್ವಲ್ಪ ಕೆಲಸವಿದೆ; ಆಮೇಲೆ ಬರುವೆನು" ಎಂದ.

"ಹೇಳುತ್ತಿರುವುದೇನು ಕೇಳುವುದಿಲ್ಲವೇ? ತಡಮಾಡದೆ ಈಗಲೇ ಬಾ!" ಎಂದು ಗದರಿದಳು.

ರಾಮನು ಮಾಡುತ್ತಿದ್ದ ಕೆಲಸವನ್ನು ಬಿಟ್ಟು, ಸರ್‍ರನೆ ಎದ್ದು ಬಂದ. ಅತ್ತಿಗೆಯ ಕೊಠಡಿಯನ್ನು ಪ್ರವೇಶಿಸಿ, ಅಲ್ಲಿದ್ದ ಒಂದು ಪೀಠದ ಮೇಲೆ ಗಂಭೀರವಾಗಿ ಕುಳಿತುಕೊಂಡ.

"ಡಾಕ್ಟರ್ ಸಾಹೇಬರು ಮನೆಯಲ್ಲಿ ಸಿಕ್ಕಿದ್ದರೇ?" ಎಂದು ಕೇಳಿದಳು ನಾರಾಯಣಿ.

"ಹುಂ!"

"ಅವರೊಡನೆ ಏನು ಹೇಳಿದೆ?"

"ಬರುವುದಕ್ಕೆ ಹೇಳಿದೆ"

ನಾರಾಯಣಿಗೆ ಅವನ ಮಾತಿನಲ್ಲಿ ನಂಬಿಕೆಯಾಗಲಿಲ್ಲ. "ಕೇವಲ ಬರಬೇಕೆಂದು ಮಾತ್ರ ಹೇಳಿದೆಯಾ? ಮತ್ತೇನೂ ಹೇಳಲಿಲ್ಲ ತಾನೇ!" ಎಂದಳು

ರಾಮ ಏನೂ ಉತ್ತರ ಕೊಡದೆ ಸುಮ್ಮನಿದ್ದ.

"ಏನೇನು ಹೇಳಿ ಬಂದೆಯೆಂದು ನಿಜವಾಗಿ ಹೇಳು!" ಎಂದು ಗದರಿದಳು ನಾರಾಯಣಿ.

"ನಾನು ಹೇಳುವುದಿಲ್ಲ."

ಅಷ್ಟರಲ್ಲೇ ನೃತ್ಯಕಾಳಿಯು ಬಂದು "ಡಾಕ್ಟರ್ ಸಾಹೇಬರು ಬರುತ್ತಿರುವರು" ಎಂದಳು.

ನಾರಾಯಣಿಯು ಹೊದಿಕೆಯನ್ನು ಹೊದ್ದುಕೊಂಡು, ಮತ್ತೊಂದು ಪಕ್ಕಕ್ಕೆ ತಿರುಗಿ ಮಲಗಿಕೊಂಡಳು. ರಾಮ ಮೆಲ್ಲನೆ ಅಲ್ಲಿಂದ ಕಂಬಿ ಕಿತ್ತ! ತುಸು ಹೊತ್ತಿನಲ್ಲೇ ಡಾಕ್ಟರ್ ಸಾಹೇಬರನ್ನು ಸಂಗಡ ಕರೆದುಕೊಂಡು ಶಾಮಲಾಲ ಒಳಗೆ ಬಂದ. ಡಾಕ್ಟರು ತಮ್ಮ ಭಾಗದ ಕೆಲಸವನ್ನು ಮುಗಿಸಿ, ಕಡೆಯಲ್ಲಿ ನಾರಾಯಣಿಯನ್ನು ಕುರಿತು ಹೇಳಿದರು: 'ಏನಮ್ಮಾ! ಜ್ವರ ವಾಸಿಯಾಗುವುದು ಅಥವಾ ಇಲ್ಲದಿರುವುದು ಡಾಕ್ಟರ್ ಕೈಯಲ್ಲಿರುವ ಮಾತೇ?

ನಿಮ್ಮ ಮೈದುನನು ಇನ್ನು ಎರಡೇ ದಿನದ ಅವಧಿ ಕೊಟ್ಟಿರುವನು. ಅಷ್ಟ ರೊಳಗೆ ಜ್ವರ ಗುಣವಾದರೆ ಸರಿ; ಇಲ್ಲದಿದ್ದರೆ ನಮ್ಮ ಮನೆಗೆ ಬೆಂಕಿ ಹೊತ್ತಿಸಿ ಬಿಡುವನಂತೆ!

ನಾಚಿಕೆಯಿಂದ ನಾರಾಯಣಿಯ ಶರೀರ ಕುಗ್ಗಿತು. "ಅವನ ಮಾತು ಗಳೇ ಹೀಗೆ! ತಾವು ಆ ವಿಷಯವಾಗಿ ಯೋಚನೆ ಮಾಡಬಾರದು," ಎಂದಳು.

"ರಾಮುಲಾಲನ ಸ್ನೇಹಿತರದೊಂದು ಪುಂಡು ಗುಂಪಿದೆಯೆಂದೂ, ಅಲ್ಲದೆ ಅವರು ಆಡಿದ ಮಾತಿನಂತೆ ಕಾರ್ಯವನ್ನು ನೆಡೆಸಿಯೇ ಬಿಡುವರೆಂದೂ ಊರಿನ ಜನರ ಬಾಯಿಂದ ಕೇಳಿರುವೆನು. ಆದ್ದರಿಂದಲೇ ಹೆದರಿಕೆಯಾಗು ತ್ತಿದೆಯಮ್ಮಾ! ನಾವು ಕೇವಲ ಔಷಧಿ ಕೊಡಬಲ್ಲೆವೇ ಹೊರತು ಪ್ರಾಣ ಕೊಡಲಾರೆವು!"

ಸ್ವಲ್ಪ ಸಮಯ ಸುಮ್ಮನಿದ್ದು, ನಾರಾಯಣಿ ಹೇಳಿದಳು: ಅಂತೂ ಒಂದಲ್ಲ ಒಂದು ದಿನ ಅವನು ಸೆರೆಮನೆಗೆ ಹೋಗುವನೆಂಬುದನ್ನು ನಾವು ಚನ್ನಾಗಿ ಬಲ್ಲೆವು. ಆದರೆ ಅವನ ಸಂಗಡ ನಾವೂ ಎಲ್ಲಿ ಹೋಗಬೇಕಾಗಿ ಬರುವುದೋ ಎಂಬುದೇ ಒಂದು ದೊಡ್ಡ ಚಿಂತೆಯಾಗಿದೆ।

ಇಂದು ನೀಲಮಣಿ ಬಾಬುಗಳು ತಮ್ಮ ಕೊಠಡಿಯಲ್ಲಿಟ್ಟಿದ್ದ ಶುದ್ಧ ಕ್ವಿನೈನನ್ನು ತಂದಿದ್ದರು. ಅದನ್ನು ಕೊಟ್ಟು, ಯಾವ ರೀತಿ ಉಪಯೋಗಿಸ ಬೇಕು ಎಂಬುದನ್ನೂ ತಿಳಿಸಿ, ಹೊರಡಲನುವಾದರು. ಆ ಹೊತ್ತಿಗೆ ಸರಿಯಾಗಿ ಶಾಮಲಾಲನು ನಾಲ್ಕು ರೂಪಾಯಿಗಳನ್ನು ತಂದು ಮುಂದೆ ಹಿಡಿದನು. ಡಾಕ್ಟರು ಆಶ್ಚರ್ಯವನ್ನು ಪ್ರಕಟಿಸುತ್ತ "ತಾವು ಇದೇನು ಮಾಡುತ್ತಿರು ವಿರಿ? ನನ್ನ ಫೀಸ್ ಒಂದು ರೂಪಾಯಿ ಮಾತ್ರ; ಅದಕ್ಕಿಂತ ಹೆಚ್ಚಿಗೆ ನಾನು ಖಂಡಿತ ತೆಗೆದುಕೊಳ್ಳಲಾರೆ. ಆ ಪದ್ಧತಿಯೇ ನನ್ನಲ್ಲಿಲ್ಲ! ಶಾಮಬಾಬೂ! ಹಣ–ಕಾಸು ನಶ್ವರವಾದದ್ದು; ಆದರೆ ಧರ್ಮವು ಎಂದೆಂದೂ ಶಾಶ್ವತ!" ಎಂದು ಹೊರಟು ಹೋದರು.

ಈ ವಿಷಯ ಹಾಗಿರಲಿ! ಅಂತೂ ಒಂದೆರಡು ದಿನಗಳಲ್ಲೇ ನಾರಾ ಯಣಿಗೆ ಗುಣಮುಖವಾಯಿತು. ಮನೆಯ ಕಾರ್ಯಕ್ರಮಗಳು ಪುನಃ ಎಂದಿನಂತೆ ನಡೆಯತೊಡಗಿದುವು.

---

೨

ಸುಮಾರು ಎರಡು ತಿಂಗಳು ಕಳೆದವು. ಒಂದು ದಿನ ನಾರಾಯಣಿಯು ನದಿಯಿಂದ ಸ್ನಾನಮಾಡಿ ಹಿಂತಿರುಗಿ ಬಂದು, ನೀರಿನ ಬಿಂದಿಗೆಯನ್ನು ಕೆಳಗಿಳಿಸುತ್ತ "ನಿತ್ತೋ! ಆ 'ಕಪಿ' ಎಲ್ಲಿ ಹೋದ?" ಎಂದು ಕೇಳಿದಳು.

'ಕಪಿ' ಯಾರೆಂಬದು ಮನೆಯವರೆಲ್ಲರಿಗೂ ಗೊತ್ತಿತ್ತು. ನೃತ್ಯಕಾಳಿಯು ಉತ್ತರವಿತ್ತಳು: ಚಿಕ್ಕ ಬಾಬುಗಳು ಈಗ ಇಲ್ಲೇ ಇದ್ದರು. ಅದೋ— ಅಲ್ಲಿ ಕುಳಿತು ಗಾಳಿಪಟ ಕಟ್ಟುತ್ತಿರುವರು.

ರಾಮುನನ್ನು ನೋಡುತ್ತಲೇ ನಾರಾಯಣಿಯು ಸಿಟ್ಟಿನಿಂದ "ಎಲೋ, ಹಾಳು ಮುಂಡೇದೇ! ಬಾ ಇಲ್ಲಿ! ನಿನ್ನ ದೆಸೆಯಿಂದ ನಾನು ಭಾವಿ-ಕೆರೆಯಲ್ಲಾದರೂ ಮುಳುಗಿ ಪ್ರಾಣ ಬಿಡಲೇ, ಹೇಳು!" ಎಂದಳು.

ರಾಮಲಾಲನು ಗಾಳಿಪಟಕ್ಕೆಂದು ದೆಬ್ಬೆಯನ್ನು ಸೀಳಿ ಸ್ವಚ್ಛ ಮಾಡುತ್ತಿದ್ದ. ಅದನ್ನು ಕೈಯಲ್ಲಿ ಹಿಡಿದಿದ್ದಂತೆಯೇ ನಾರಾಯಣಿಯ ಎದುರಿಗೆ ಬಂದು ನಿಂತ.

"ಬಿಹಾರಿಯ ತೋಟದ ಪಡವಲ ಬಳ್ಳಿಯನ್ನು ಏಕೆ ಕಿತ್ತು ಬಂದಿ, ಹೇಳು!" ಎಂದಳು ನಾರಾಯಣಿ,

"ನಾನು ಕಿತ್ತಿ ಬಂದದ್ದನ್ನು ಅವರೆಲ್ಲಿ ನೋಡಿದರು?"

"ಅವರು ನೋಡಲಿ, ನೋಡದಿರಲಿ! ನಾನು ನೋಡಿರುವೆನು! ಏತಕ್ಕೆ ಕಿತ್ತು ಬಂದೆ, ಹೇಳು!"

"ಆ ಮುದುಕಿಯು ನನ್ನನ್ನೇಕೆ ಬೈಯಬೇಕಾಗಿತ್ತು?"

ನಾರಾಯಣಿಯು ರೋಷದಿಂದ ಹಲ್ಲುಗಳನ್ನು ಕಡಿಯುತ್ತ "ಅವಳು ನಿನ್ನನ್ನು ಬೈದ ವಿಷಯ ಹಾಗಿರಲಿ, ನಂತರ ಕೇಳುವೆನು! ನೀನು ಈ ರೀತಿಯ ಕಳ್ಳತನಕ್ಕೇಕೆ ಕೈ ಹಾಕಿದೆ, ಎಂಬುದನ್ನು ಮೊದಲು ತಿಳಿಸು!" ಎಂದಳು

ರಾಮಲಾಲನಿಗೆ ಈ ಮಾತನ್ನು ಕೇಳಿ ಒಮ್ಮೆಲೇ ಕ್ರೋಧ ಮತ್ತು ವಿಸ್ಮಯಗಳುಂಟಾದವು "ಕಳ್ಳತನ ಮಾಡಿದೆನೇ? ಎಂದಿಗೂ ಅಲ್ಲ! ಒಂದೆರಡು ಕಾಯಿ ಮತ್ತು ಬಳ್ಳಿಗಳನ್ನು ಕಿತ್ತರೆ, ಅದು ಕಳ್ಳತನವಾಯಿತೆ?" ಎಂದ.

"ಹೌದು, ಕಪಿ ಮುಂಡೇದೇ! ಹೌದು! ಕಳ್ಳತನವೇ ಹೌದು!! ಕಳ್ಳತನವೆಂದರೆ ಏನೆಂಬುದನ್ನು ಒಂದು ಪುಟ್ಟ ಮಗು ಸಹ ತಿಳಿಯಬಲ್ಲದು! ಇಷ್ಟು ದೊಡ್ಡವನಾಗಿರುವೆ, ನಿನಗಿನ್ನೂ ತಿಳಿಯಲಿಲ್ಲವೇ? ಒಂದು ಕಾಲಿನಿಂದ ನಿಂತಿರು! ದುಷ್ಟ! ಎಲ್ಲಿ, ನಿಂತುಕೋ, ಕಾಲನ್ನೆತ್ತು!" ಎಂದಳು ಮತ್ತಷ್ಟು ಸಿಟ್ಟಿನಿಂದ.

ಈ ಮನೆಯಲ್ಲಿ ರಾಮನ ವಾಹನವೆಂದರೆ ಪುಟ್ಟ ಗೋವಿಂದ. ಇಪ್ಪತ್ತು ನಾಲ್ಕು ಗಂಟೆಗಳ ಕಾಲವೂ ಅವನು ರಾಮನ ಬಳಿಯಲ್ಲೇ ಇರುತ್ತಿದ್ದ; ಮತ್ತು ಅವನ ಎಲ್ಲ ಕೆಲಸಗಳಲ್ಲೂ ಸಹಾಯ ಮಾಡುತ್ತಿದ್ದ. ರಾಮನ ಆಜ್ಞೆಯಂತೆ ಅವನು ಇದುವರೆಗೂ ಗಾಳಿಯಪಟವನ್ನು ಹಿಡಿದುಕೊಂಡೇ ನಿಂತಿದ್ದ. ಈ ಗಡಿಬಿಡಿಯನ್ನು ನೋಡಿ, ಗಾಳಿಪಟವನ್ನು ಅಲ್ಲೇ ಬಿಸುಟ, ಅಮ್ಮನ ಬಳಿ ಓಡಿ ಬಂದು ನಿಂತ.

ರಾಮನು ಒಂದು ಕಾಲಿನಿಂದ ನಿಂತುಕೊಳ್ಳಲು ಹಿಂದು-ಮುಂದು ನೋಡುತ್ತಿರುವುದನ್ನು ಕಂಡು ಅವನು ಚಟ್ಟನೆ ಹೇಳಿದ "ಚಿಕ್ಕಪ್ಪಾ! ನಿಂತಿರು, ಒಂದು ಕಾಲಿನಿಂದ! ಇದೋ ಹೀಗೆ—" ಎಂದು ಹೇಳಿ, ತಾನೇ ಒಂದು ಕಾಲಿನಿಂದ ನಿಂತುಕೊಂಡು, ಚಿಕ್ಕಪ್ಪನಿಗೆ ತೋರಿಸಿಕೊಟ್ಟ.

ರಾಮನು ಪಟ್ಟನೆ ಅವನ ಕೆನ್ನೆಯ ಮೇಲೊಂದು ಏಟು ಕೊಟ್ಟು, ಒಮ್ಮೆ ಹಿಂತಿರುಗಿ ನೋಡಿ, ನಂತರ ಒಂದು ಕಾಲಿನಲ್ಲಿ ನಿಂತುಕೊಂಡ.

ನಾರಾಯಣಿಯು ಬಹಳ ಪ್ರಯತ್ನದಿಂದ ತನ್ನ ನಗೆಯನ್ನು ತಡೆದುಕೊಂಡು ಅಡಿಗೆಯ ಮನೆಗೆ ಹೊರಟುಹೋದಳು ಒಂದೆರಡು ನಿಮಿಷಗಳ ನಂತರ ಬಂದು ನೋಡಲಾಗಿ, ರಾಮ ಹಾಗೆಯೇ ಒಂದು ಕಾಲಿನಲ್ಲಿ ನಿಂತಿದ್ದ; ಮತ್ತು ಪಂಚೆಯ ಒಂದು ತುದಿಯಿಂದ ಬಾರಿ ಬಾರಿಗೂ ಕಣ್ಣುಗಳನ್ನೊರೆಸಿಕೊಳ್ಳುತ್ತಿದ್ದ.

"ಸಾಕು, ಹೋಗು! ಇನ್ನು ಮೇಲೆ ಈ ಪರಿಯ ದುಷ್ಟತನ ಮಾಡಬೇಡ!" ಎಂದಳು ನಾರಾಯಣಿ.

ರಾಮ ಅವಳ ಮಾತನ್ನು ಕೇಳಲಿಲ್ಲ. ಕೋಪದಿಂದ ಹಾಗೆಯೇ ಒಂಟಿ ಕಾಲಿನಲ್ಲಿ ನಿಂತು, ಕಣ್ಣೀರೊರಸಿಕೊಳ್ಳುತ್ತಿದ್ದ.

ನಾರಾಯಣಿಯು ಅವನ ಹತ್ತಿರಕ್ಕೆ ಹೋಗಿ, ಕೈ ಹಿಡಿದೆಳೆದಳು. ಆದರೂ ಅವನು ಕೇಳಲಿಲ್ಲ. ಸೆಟೆದುಕೊಂಡು ನಿಂತೇ ಇದ್ದ ಮತ್ತು ಜೋರಾಗಿ ಒದರಿ ಅವಳ ಕೈಗಳನ್ನು ದೂರ ಮಾಡಿದ. ನಾರಾಯಣಿಯು ನಗುತ್ತ, ಮತ್ತೊಮ್ಮೆ ಅವನ ಕೈ ಹಿಡಿದೆಳೆಯಲು ಪ್ರಯತ್ನಿಸಿದಳು. ಆದರೆ ಅವನು ಮೊದಲಿನಂತೆಯೇ ಜೋರಾಗಿ ಅವಳ ಕೈಗಳನ್ನು ಬಿಸುಡಿ ಅಲ್ಲಿಂದ ಓಡಿಹೋದ.

ಒಂದು ಗಂಟೆಯ ನಂತರ ನೃತ್ಯಕಾಳಿಯು ರಾಮನನ್ನು ಕರೆಯಲು ಬಂದಾಗ, ಅವನು ಚಂಡೀ ಮಂಟಪದ ಬಳಿಯ ಅಂಗಳದಲ್ಲಿ ಕಾಲುಗಳನ್ನು ಚಾಚಿಕೊಂಡು, ಮುಖವನ್ನು ಉಬ್ಬಿಸಿಕೊಂಡು ಕಳಿತಿದ್ದ.

"ಚಿಕ್ಕ ಬಾಬೂ! ಶಾಲೆಗೆ ಹೊತ್ತಾಯಿತು, ಬಹೂಜೀ *ಯವರು ಕರೆಯುತ್ತಿರುವರು" ಎಂದಳು ದಾಸಿ

ರಾಮನು ಏನೂ ಉತ್ತರ ಕೊಡಲಿಲ್ಲ. ಕೇಳಿಸಿದರೂ ಕೇಳಿಸದವನಂತೆ ಸುಮ್ಮನೆಯೇ ಕುಳಿತಿದ್ದ.

ದಾಸಿಯು ಪುನಃ ಹೇಳಿದಳು: ಸ್ನಾನ ಮಾಡಿ, ಊಟ ಮಾಡಿಕೊಂಡು ಶಾಲೆಗೆ ಹೋಗಬೇಕಂತೆ—ಬಹೂಜೀಯವರು ಹೇಳಿರುವರು !

ರಾಮನು ಕಣ್ಣುಗಳನ್ನು ಕೆರಳಿಸಿಕೊಂಡು, ಕೋಪದಿಂದ "ನೀನು ಇಲ್ಲಿಂದ ತೊಲಗು! ದೂರವಾಗು!" ಎಂದು ಗರ್ಜಿಸಿದ.

"ನಾನು ತೊಲಗುವುದು ಹಾಗಿರಲಿ! ಬಹೂಜೀ ಏನು ಹೇಳಿರುವರೆಂಬುದನ್ನು ಕೇಳಿದೆಯಾ!"

"ನಾನು ಕೇಳಲಿಲ್ಲ, ಹೋಗು! ನಾನು ಸ್ನಾನ ಮಾಡುವುದಿಲ್ಲ; ಊಟ ಮಾಡುವುದಿಲ್ಲ—ಏನನ್ನೂ ಮಾಡುವುದಿಲ್ಲ,—ನೀನು ಇಲ್ಲಿಂದ ಹೊರಟುಹೋಗು!"

"ಸರಿ! ಹಾಗಾದಾರೆ ನಾನು ಹೋಗಿ ಹೇಳಿಬಿಡುವೆನು" ಎಂದು, ದಾಸಿ ಅಲ್ಲಿಂದ ಹೊರಟುಹೋದಳು.

---

*ಬಂಗಾಲ ದೇಶದಲ್ಲಿ ಮನೆಯ ಯಜಮಾನಿಯನ್ನು 'ಬಹೂಜೀ' ಎಂದು ಕರೆಯುವ ವಾಡಿಕೆಯುಂಟು.

ರಾಮನು ತಕ್ಷಣ ಅಲ್ಲಿಂದ ಎದ್ದು ಹೊರಟು, ಮನೆಯ ಹಿಂಭಾಗದಲ್ಲಿದ್ದ ಕೊಳಕು ನೀರಿನ ಕೆರೆಯಲ್ಲಿ—ಒಮ್ಮೆ ಮುಳುಗಿ ಎದ್ದ. ಒದ್ದೆ ತಲೆ, ಒದ್ದೆ ಬಟ್ಟೆಯೊಡನೆ ಹಾಗೆಯೇ ಬಂದು, ಪುನಃ ಅಲ್ಲೇ ಕುಳಿತ. ನಾರಾಯಣಿಗೆ ಈ ವಿಷಯ ತಿಳಿದೊಡನೆಯೇ, ಗಾಬರಿಯಿಂದ ಓಡಿ ಬಂದಳು. "ಇದೇಕೆ ಹೀಗೆ ಮಾಡಿದೆಯೋ, ಪಿಶಾಚಿ ! ಆ ಕೆರೆಗೆ ಕಾಲಿಡಲು ಸಹ ಎಲ್ಲರೂ ಹೆದರಿ ಸಾಯುವರು; ಹೀಗಿರುವಲ್ಲಿ ನೀನು ನಿರ್ಭೀತಿಯಿಂದ ಮುಳುಗಿ ಬಂದೆಯಾ ?" ಎಂದಳು.

ತನ್ನ ಸೀರೆಯ ಸೆರಗಿನಿಂದ ಅವನ ಮೈ-ಕೈ-ತಲೆ ಎಲ್ಲವನ್ನೂ ಚೆನ್ನಾಗಿ ಒಳರೆಸಿದು, ಬಟ್ಟೆಗಳನ್ನು ಬದಲಾಯಿಸಿದಳು, ಮತ್ತು ಮನೆಗೆ ಕರೆದು ಕೊಂಡು ಬಂದು ಉಣಬಡಿಸಿದಳು. ರಾಮನು ತಟ್ಟೆಯ ಮುಂದೆ ಮುಖ ಗಂಟಿಕ್ಕಿಕೊಂಡು, ಗೂಟದಂತೆ—ಸುಮ್ಮನೆ ಕುಳಿತಿದ್ದ.

ನಾರಾಯಣಿಗೆ ಅವನ ಮನಸ್ಸಿನ ಮಾತು ತಿಳಿಯಿತು. ಆಗ ಅವಳು ಅವನ ಹತ್ತಿರ ಬಂದು ಕುಳಿತು, ಮಸ್ತಕದ ಮೇಲೆ ಪ್ರೀತಿಯಿಂದ ಕೈಯಾಡಿ ಸುತ್ತ ಹೇಳಿದಳು: "ನೀನು ರಾಜ ಹುಡುಗನಲ್ಲವೇ ! ಈ ಹೊತ್ತು ನೀನೇ ಊಟ ಮಾಡಿಕೊ; ರಾತ್ರಿಗೆ ನಾನು ಉಣಿಸುವೆನು. ಇದೋ ನೋಡು ! ಇನ್ನೂ ರೊಟ್ಟಿ ಮಾಡಿ ಮುಗಿಸಬೇಕು. ನೀನು ಒಳ್ಳೆಯ ರಾಜ ಹುಡುಗ! ಊಟ ಮಾಡಿಕೋ !"

ಆಗ, ರಾಮ ಸುಮ್ಮನೆ ಊಟಮಾಡಿ, ಬಟ್ಟೆಯನ್ನು ಹಾಕಿಕೊಂಡು ಶಾಲೆಗೆ ಹೋದ.

ದಾಸಿಯೆಂದಳು: ನಿಮ್ಮಿಂದಲೇ ಹುಡುಗನು ಕೆಟ್ಟುಹೋಗುತ್ತಿರು ವನು, ಬಹೂಜೀ ! ಇಷ್ಟು ದೊಡ್ಡ ಹುಡುಗನನ್ನು ತೊಡೆಯ ಮೇಲೆ ಕುಳ್ಳಿ ರಿಸಿಕೊಂಡು ಉಣಿಸುವುದೇದರೇನು? ಸ್ವಲ್ಪ ಸಿಟ್ಟುಗೊಂಡನೆಂದರೆ, ತೊಡೆಯ ಮೇಲೆ ಎತ್ತಿಕೊಂಡು ಊಟ ಮಾಡಿಸುವುದು—ಇದೆಲ್ಲಿಯ ರೀತಿ ನಿಮ್ಮದು ?

ನಾರಾಯಣಿಯು ಒಮ್ಮೆ ನಸುನಕ್ಕು ಹೇಳಿದಳು: ಹಾಗಿಲ್ಲದಿದ್ದ ಅವನು ಊಟವನ್ನೇ ಮಾಡುವುದಿಲ್ಲವಲ್ಲ! ರಾತ್ರಿಗೆ ಉಣಿಸುವೆನೆಂದು ಆ ತೋರಿಸದಿದ್ದರೆ ಈಗ ಅವನು ಊಟ ಮಾಡುತ್ತಿದ್ದನೆಂದು ತಿಳಿದೆಯಾ ?

ಮುಖ ಗಂಟು ಹಾಕಿಕೊಂಡು ಹಾಗೆಯೇ ಕುಳಿತಿರುತ್ತಿದ್ದ—ಶಾಲೆಗೆ ಸಹ ಹೋಗುತ್ತಿರಲಿಲ್ಲ!

"ಏಕೆ ಊಟ ಮಾಡುತ್ತಿರಲಿಲ್ಲ? ಹಸಿವೆಯಾದರೆ ತಾನೇ ಊಟ ಮಾಡುತ್ತಿದ್ದ. ಇಷ್ಟು ದೊಡ್ಡ ಹುಡುಗನಾಗಿ........"

ನಾರಾಯಣಿಯು ಒಳಗಿಂದೊಳಗೇ ಕೋಪಗೊಂಡು ಹೇಳಿದಳು: ನೀವು ಅವನ ವಯಸ್ಸೊಂದನ್ನೇ ನೋಡುವಿರಿ! ಇನ್ನೂ ಸ್ವಲ್ಪ ದೊಡ್ಡವನಾಗಿ ಬುದ್ಧಿ ಬಂದರೆ, ಅವನಿಗೇ ನಾಚಿಕೆಯುಂಟಾಗುವುದು. ಆಗ ಅವನು ತೊಡೆಯ ಮೇಲೆ ಕುಳಿತುಕೊಳ್ಳುವುದೂ ಇಲ್ಲ; ನನ್ನ ಕೈಯಿಂದ ಊಟ ಮಾಡಿಸಿಕೊಳ್ಳುವುದೂ ಇಲ್ಲ!

ಅದಕ್ಕೆ ದಾಸಿಯು ದುಃಖಿತಳಾಗಿ ಉತ್ತರವಿತ್ತಳು: ನಾನೇನೋ ಒಳ್ಳೆಯದಕ್ಕಾಗಿ ಹೇಳಿದೆ. ಇಲ್ಲದಿದ್ದರೆ ನನಗೇನು ಬೇಕಾಗಿದೆ? ಹನ್ನೆರಡು-ಹದಿಮೂರು ವರ್ಷಗಳಾಗುತ್ತ ಬಂದವು. ಈಗಲೂ ಬುದ್ಧಿ ಬರದಿದ್ದರೆ ಇನ್ನಾವಾಗ ಬರುವುದು?

ನಾರಾಯಣಿಗೆ ಈಗ ನಿಜವಾಗಿಯೂ ಕೋಪವುಂಟಾಯಿತು. ಅವಳೆಂದಳು: ಬುದ್ಧಿ ಬರುವುದಕ್ಕೆ ಇಂತಹ ವಯಸ್ಸೇ ಆಗಬೇಕೆಂಬುದೇನೂ ಇಲ್ಲ, ನಿತ್ತೋ! ಕೆಲವರಿಗೆ ಎರಡು ವರ್ಷ ಮುಂಚಿತವಾಗಿ ಬರುವುದು; ಕೆಲವರಿಗೆ ಒಂದೆರಡು ವರ್ಷ ನಂತರ ಬರುವುದು, ಅಷ್ಟೇ. ಅದಿರಲಿ, ಅವನಿಗೆ ಬುದ್ಧಿ ಬಂದರೇನು, ಬರದಿದ್ದರೇನು—ನಿಮಗೇಕೆ ಇಷ್ಟೊಂದು ಚಿಂತೆ?

"ಇದೇ ನಿಮ್ಮಲ್ಲಿರುವ ತಪ್ಪು, ಬಹೂಜೀ! ಅವನು ಎಷ್ಟು ಹಟವಾದಿಯಾಗುತ್ತ ಬಂದಿರುವನೆಂಬುದು ನಿಮಗೆ ತಿಳಿಯದ ವಿಷಯವಲ್ಲ. ನಿಮ್ಮ ಮುದ್ದಿನಿಂದಲೇ ಅವನು ಹಾಳಾದನೆಂದು ಈ ಮೊಹಲ್ಲಾದ ಜನರೆಲ್ಲಾ ಹೇಳು..........."

ನಾರಾಯಣಿಯು ಶುಷ್ಕ ಕಂಠದಿಂದ ನುಡಿದಳು: ಮೊಹಲ್ಲಾದ ಜನರು ನಾನು ಅವನನ್ನು ಮುದ್ದಿಸುವುದು—ಪ್ರೀತಿಸುವುದನ್ನೇ ನೋಡುವರೇ ಹೊರತು, ಗದರಿಸುವುದು—ಶಿಕ್ಷಿಸುವುದನ್ನು ನೋಡುವರೇ? ಆದರೆ ನೀನೇನೂ ಹೊರಗಿನವಳಲ್ಲ—ಎಲ್ಲವನ್ನೂ ನೋಡುತ್ತಿರುವೆ!—ಬೆಳಗಿನಿಂದ

ಒಂಟಿ ಕಾಲಿನಲ್ಲಿ ನಿಂತು ಅತ್ತು ಅತ್ತು ಸಾಕಾದ; ನಂತರ ಆ ಕೆಟ್ಟ ನೀರಿನಲ್ಲಿ ಮುಳುಗಿ ಬಂದ ! ಎಲ್ಲಿ ಖಾಯಿಲೆ ಬೀಳುವನೋ ಆ ದೇವರೇ ಬಲ್ಲ ಇಷ್ಟಾಗಿ, ಅವನನ್ನು ಉಪವಾಸ ಶಾಲೆಗೆ ಕಳುಹಿಸಬೇಕಾಗಿತ್ತೆಂಬುದು ನಿನ್ನ ಇಚ್ಛೆಯಾಗಿತ್ತೇ ? ಮನೆಯವರ ಮತ್ತು ಹೊರಗಿನವರ ಈ ಲಾಂಛನೆಯನ್ನು ನಾನು ಸಹಿಸಲಾರೆ, ನಿತ್ತೋ !

ಹೀಗೆನ್ನುತ್ತಿರುವಂತೆಯೇ ಅವಳ ಸ್ವರವು ಗದ್ಗದಿತವಾಯಿತು, ಕಣ್ಣುಗಳು ಕಂಬನಿದುಂಬಿದುವು; ಸೀರೆಯ ಸೆರಗಿನಿಂದ ಅವಳು ಕಣ್ಣೊರೆಸಿಕೊಂಡಳು. ಇದೇ ವಿಷಯವಾಗಿ ಹಿಂದಿನ ರಾತ್ರಿ ಅವಳಿಗೂ ಅವಳ ಪತಿಗೂ ಸಂವಾದ ಚರ್ಚೆಗಳು ನಡೆದಿದ್ದುವು; ಆದರೆ ದಾಸಿಗೆ ಈ ವಿಷಯ ಗೊತ್ತಿರಲಿಲ್ಲ, ಅವಳು ಅತ್ಯಂತ ಲಜ್ಜೆ ಹಾಗೂ ದುಃಖದಿಂದ ಉತ್ತರವಿತ್ತಳು: ಬಹೂಜೀ! ಅಳುತ್ತೀರೇಕೆ ? ನಾನಾಡಿದ ಮಾತುಗಳಲ್ಲೇನಾದರೂ ಅಪರಾಧವಿದೆಯೇ? ಜನರು ಈ ರೀತಿಯೆಲ್ಲ ಮಾತನಾಡಿಕೊಳ್ಳುವುದನ್ನು ಕೇಳಿ, ನಾನು ನಿಮಗೆ ಸ್ವಲ್ಪ ಎಚ್ಚರಿಕೆ ಇತ್ತೆ; ಅಷ್ಟೆ !

ಕಣ್ಣೊರೆಸಿಕೊಳ್ಳುತ್ತ ನಾರಾಯಣಿಯೆಂದಳು : ದೇವರ ದೃಷ್ಟಿಯಲ್ಲಿ ಎಲ್ಲಾ ಮನುಷ್ಯರೂ ಒಂದೇ ರೀತಿ ಇರುವುದಿಲ್ಲ. ಅವನು ಸ್ವಲ್ಪ ಹಟವಾದಿ; ಆದ್ದರಿಂದಲೇ ನಾನು ಅವರಿವರು ಹೇಳುವ ಮಾತುಗಳೆಲ್ಲವನ್ನೂ ಸಹಿಸಿಕೊಂಡು ಸುಮ್ಮನಿರಬೇಕಾಗಿದೆ ಅವನನ್ನು ಮುದ್ದಿನಿಂದ ಕಾಣುವೆನೆಂದು ಜನರು ಇಷ್ಟೇಕೆ ನನ್ನನ್ನು ದೂಷಿಸುವರು ? ಅವನನ್ನು ಕತ್ತರಿಸಿ ನದಿಯಲ್ಲಿ ತಳ್ಳಿಬಿಡಬೇಕೆಂಬುದು ಜನರ ಇಚ್ಛೆಯೇ ? ಹೇ ಭಗವಂತ !—ಎನ್ನುತ್ತ ಅವಳು ಮರುಕ್ಷಣವೂ ಅಲ್ಲಿ ನಿಲ್ಲದೆ ಹೊರಟುಹೋದಳು.

ನಾಚಿಕೆ ಮತ್ತು ಅಪಮಾನಗಳಿಂದ ದಾಸಿಯ ಮುಖವು ಪೆಚ್ಚಾಯಿತು. ಅವಳು ಮನಸ್ಸಿನಲ್ಲೇ ಅಂದುಕೊಂಡಳು—ಇದೇನು ವಿಚಿತ್ರವೆಂಬುದು ಆ ಭಗವಂತನಿಗೇ ಗೊತ್ತು ! ಪ್ರತಿಯೊಂದು ವಿಷಯದಲ್ಲೂ ಎಷ್ಟೊಂದು ಬುದ್ಧಿ-ಧೈರ್ಯಗಳಿರುವ ಈ ಹೆಂಗಸು, ಇಷ್ಟು ಸಣ್ಣ ಮಾತನ್ನು ತಿಳಿದುಕೊಳ್ಳಲಿಲ್ಲವೇ ? ' ಹುಡುಗನನ್ನು ಬೈಯುವುದಿಲ್ಲವೆ-ಶಿಕ್ಷಿಸುವುದಿಲ್ಲವೇ ' ಎಂದು ಕೇಳುವಳು ! ಒಂದೆರಡು ನಿಮಿಷ ಒಂಟಿ ಕಾಲಿನಿಂದ ನಿಂತ ಮಾತ್ರಕ್ಕೆ

ಹುಡುಗ ಸವೆದುಹೋಗುವನೇ ? ಪ್ರಪಂಚವೇ ತಲೆ ಕೆಳಗಾದಂತೆ ಅವಳ ಮನೋಭಾವನೆ !

ರಾಮನಿಗೆ ಅಣ್ಣನ ಸಂಗಡ ಕುಳಿತುಕೊಂಡು ಊಟ ಮಾಡುವುದೆಂದರೆ ಸ್ವಲ್ಪವೂ ಇಷ್ಟವೇ ಇಲ್ಲ. ಇಂದು ಬೇಕೆಂತಲೇ ನಾರಾಯಣಿಯು ಅಣ್ಣ-ತಮ್ಮಂದಿರಿಬ್ಬರಿಗೂ ಪಕ್ಕ-ಪಕ್ಕದಲ್ಲಿ ತಟ್ಟೆ ಹಾಕಿ ಬಡಿಸಿದ್ದಳು. ರಾಮನು ಅಡಿಗೆಯ ಮನೆಯನ್ನು ಪ್ರವೇಶಿಸುತ್ತಲೇ ಸಿಟ್ಟಿನಿಂದ ಎಗರಾಡುತ್ತ "ಹೋಗು! ನಾನು ಊಟ ಮಾಡುವದಿಲ್ಲ,— ಈ ದಿನ ಊಟವನ್ನೇ ಮಾಡುವುದಿಲ್ಲ!" ಎಂದ.

"ಹಾಗಿದ್ದರೆ ಹೋಗು! ಮಲಗಿಕೋ!" ಎಂದಳು ನಾರಾಯಣಿ.

ನಾರಾಯಣಿಯ ಗಂಭೀರ ಕಂಠಸ್ವರವನ್ನು ಕೇಳಿ, ರಾಮ ಹೆದರಿ ಸುಮ್ಮನಾದ. ಆದರೂ ಊಟಕ್ಕೆ ಮಾತ್ರ ಕುಳಿತುಕೊಳ್ಳಲಿಲ್ಲ, ಸುಮ್ಮನೆಯೇ ನಿಂತಿದ್ದ.

ಅಡಿಗೆಯ ಮನೆಯ ಮತ್ತೊಂದು ಬಾಗಿಲಿನಿಂದ ಶಾಮಲಾಲನು ಒಳಗೆ ಪ್ರವೇಶಿಸುವುದನ್ನು ಕಾಣುತ್ತಲೇ, ರಾಮ ಅಲ್ಲಿಂದ ಕಾಲಿಗೆ ಬುದ್ಧಿ ಹೇಳಿದ. ಶಾಮಲಾಲನು ಊಟಕ್ಕೆ ಕುಳಿತುಕೊಂಡು "ರಾಮ ಊಟ ಮಾಡಲಿಲ್ಲವೇ?" ಎಂದು ಕೇಳಿದನು.

ನಾರಾಯಣಿಯು ಸಂಕ್ಷೇಪವಾಗಿ ನುಡಿದಳು: ಅವನು ನನ್ನ ಸಂಗಡ ಊಟ ಮಾಡುವನು.

ಊಟ ಮುಗಿಸಿ ಶಾಮಲಾಲನು ಹೊರಗೆ ಹೋಗುತ್ತಲೇ, ರಾಮನು ಮುಷ್ಟಿಯ ತುಂಬ ಬೂದಿಯನ್ನು ಹಿಡಿದುಕೊಂಡು, ಒಳಗೆ ಪ್ರವೇಶಿಸಿ ಹೇಳಿದ— "ಎಲ್ಲರ ತಟ್ಟೆಯಲ್ಲೂ ಬೂದಿ ಹಾಕಿಬಿಡುವೆನು—ಯಾರನ್ನೂ ಊಟಮಾಡಗೊಡುವುದಿಲ್ಲ! ಹಾಕಲೇ?" ಎಂದ.

ನಾರಾಯಣಿಯು ತಲೆಯೆತ್ತಿ ನೋಡಿ ಹೇಳಿದಳು: ಹಾಕಿ ನೋಡು ಎಂತಹ ಶಿಕ್ಷೆ ದೊರಕುವುದೆಂದು—!

ರಾಮನು ಕೈತುಂಬ ಬೂದಿಯನ್ನು ಹಾಗೆಯೇ ಹಿಡಿದುಕೊಂಡು, ಧ್ವನಿಯನ್ನು ಬದಲಾಯಿಸಿ, "ಶಿಕ್ಷೆಯಂತೆ, ಬಹಳ ಭಾರಿ ಶಿಕ್ಷೆ! ರಾತ್ರಿ ಊಟ ಮಾಡಿಸುವೆನೆಂದು ಹೇಳಿ, ಮೋಸಮಾಡಿ, ಈಗ ಶಿಕ್ಷೆ ಕೊಡುವೆನೆಂದು ಹೇಳುವೆಯಾ?" ಎಂದ.

"ಹಾಗಿದ್ದರೆ ಬೆಳಿಗ್ಗೆ ಏಕೆ ಊಟ ಮಾಡಿದೆ ? "

"ರಾತ್ರಿಗೆ ಊಟ ಮಾಡಿಸುವೆನೆಂದು ನೀನು ಹೇಳಿದ್ದರಿಂದ ! "

" ಇಷ್ಟು ದೊಡ್ಡವನಾಗಿರುವೆ, ಪರರ ಕೈಯಿಂದ ಊಟ ಮಾಡಿಸಿಕೊಳ್ಳಲು ನಿನಗೆ ನಾಚಿಕೆಯಾಗುವುದಿಲ್ಲವೇ ? "

ರಾಮನಿಗೆ ಅತ್ಯಾಶ್ಚರ್ಯವಾಯಿತು. ಅವನೆಂದ : ಪರರ ಕೈಯೇ ? ಯಾರದು ? ಏಕೆ; ಹೀಗೆ ಹೇಳುತ್ತಿರುವೆ ?

ನಾರಾಯಣಿಯು ಮುಂದೆ ಹೆಚ್ಚಿಗೆ ಚರ್ಚೆ ಮಾಡಲಿಲ್ಲ. " ಹೋಗು! ಬೂದಿಯನ್ನು ಬಿಸುಟು, ಕೈ ತೊಳೆದುಕೊಂಡು ಬಾ. ಆದರೆ ಮಾತ್ರ, ಇನ್ನು ಮುಂದೆ ಎಂದೂ ಊಟ ಮಾಡಿಸೆಂದು ಹೇಳಬಾರದು, ತಿಳಿಯಿತೇ ? " ಎಂದಳು ಮತ್ತು ರಾಮನನ್ನು ಕುಳ್ಳಿರಿಸಿಕೊಂಡು ಊಟ ಮಾಡಿಸುತ್ತಿದ್ದಳು ಆಷ್ಟರಲ್ಲಿ ದಾಸಿಯು – ಏನೂ ಕೆಲಸವಿಲ್ಲದಿದ್ದರೂ ಸುಮ್ಮನೆ ಒಂದು ಬಾರಿ— ಅಡಿಗೆಯ ಮನೆಯ ಬಾಗಿಲ ಮುಂದೆ ಹಾದು, ಅತ್ತಕಡೆಯ ಅಂಗಳಕ್ಕೆ ಹೋದಳು.

ನಾರಾಯಣಿಯು ಇದನ್ನು ಅರಿತುಕೊಂಡಳು. ರಾಮನನ್ನು ಕುರಿತು ಹೇಳಿದಳು : ರಾಮ! ನಿನಗೆ ಬುದ್ಧಿ ಬರುವುದೆಂದು ? ಆ ಪರಮಾತ್ಮನು ನಿನಗೆಂದೂ 'ಸುಮತಿ' ಯನ್ನೀಯನೇ ? ಜನಗಳ ನಿಂದನೆ ಮತ್ತು ದೂಷಣೆಯನ್ನು ನಾನಿನ್ನು ಸಹಿಸಲಾರೆ !

ರಾಮನು ಬಾಯಲ್ಲಿದ್ದ ತುತ್ತನ್ನು ನುಂಗುತ್ತ "ಆ ಜನರಾರು ? ಅವರ ಹೆಸರನ್ನು ಸ್ವಲ್ಪ ಹೇಳು ! " ಎಂದ.

ಆದರೆ ಕೆಲವು ತಿಂಗಳ ನಂತರ ನಾರಾಯಣಿಗೆ ನಿಜವಾಗಿಯೂ ಅಸಹ್ಯವೆನಿಸಿತು. ಅವಳ ವಿಧವೆ ಮಾತೆ ದಿಗಂಬರಿಯು ತನ್ನ ಹತ್ತು ವರ್ಷದ ಬಾಲಕಿ ಸುಂಧುನಿಯ ಸಂಗಡ, ಇದುವರೆಗೂ ಹಾಗೂ ಹೀಗೂ ತನ್ನ ಅಣ್ಣನ ಮನೆಯಲ್ಲಿ ಕಾಲವನ್ನು ತಳ್ಳುತ್ತಿದ್ದಳು. ಆ ಭ್ರಾತೃವಿನ ದೇಹಾಂತವಾದ ಬಳಿಕ ದಿಗಂಬರಿಗೆ ಇರಲು ಎಲ್ಲೂ ಸ್ಥಳವಿಲ್ಲದಾಯಿತು ನಾರಾಯಣಿಯು ಬಹಳ ಪ್ರಯತ್ನದಿಂದ ಪತಿಯನ್ನು ಒಪ್ಪಿಸಿ, ಆಳನ್ನು ಕಳುಹಿಸಿ ತಾಯಿಯನ್ನು ಕರೆಸಿಕೊಂಡಳು. ಮಾತೆಯು ಬಂದಳು. ಬರುತ್ತಲೇ ಮಗಳಾದ ನಾರಾಯಣಿಯ ಮೇಲೆ ತನ್ನ ದರ್ಪವನ್ನು ತೋರಿಸಲಾರಂಭಿಸಿದಳು

ಸಾಲದುದಕ್ಕೆ ರಾಮನ ಮೇಲೂ ತನ್ನ ಅಧಿಕಾರವನ್ನು ನಡೆಸಬೇಕೆಂದು ಅಪೇಕ್ಷಿಸಿದಳು ಬಂದಾಗಿನಿಂದಲೂ ಅವಳು ರಾಮನನ್ನು ದ್ವೇಷದ ದೃಷ್ಟಿಯಿಂದಲೇ ಕಾಣತೊಡಗಿದಳು

ಇಂದು ಬೆಳಗಾಗುತ್ತಲೇ ರಾಮನು ಎಲ್ಲಿಂದಲೋ ಒಂದು ಅರಳಿಯ ಸಸಿಯನ್ನು—ಇನ್ನೂ ಎರಡು-ಮೂರು ವೊಳದಷ್ಟಿರಬಹುದು— ತಂದು ಮನೆಯ ಅಂಗಳದ ಮಧ್ಯದಲ್ಲಿ ಸರಿಯಾಗಿ ನೆಡತೊಡಗಿದನು. ಅಡಿಗೆಯ ಮನೆ ಬಾಗಿಲಲ್ಲಿ ಜಪಮಣಿಯನ್ನೆಣಿಸುತ್ತ ಕುಳಿತಿದ್ದ ದಿಗಂಬರಿಯು ಎಲ್ಲವನ್ನೂ ನೋಡುತ್ತಿದ್ದಳು "ರಾಮ! ಇದೇನು ಕೆಲಸ ಮಾಡುತ್ತೀರುವೆ? ಎಂದು ನುಡಿದಳು ತೀವ್ರ ಕಂಠದಿಂದ.

ರಾಮನು ಅವಳ ಕಡೆ ನೋಡುತ್ತ ಹೇಳಿದ: ಅರಳಿಯ ಗಿಡ ದೊಡ್ಡದಾದರೆ, ಬೇಕಾದಷ್ಟು ನೆರಳು ಸಿಕ್ಕುವುದು. ಅದರ ನೆರಳು ಮತ್ತು ಗಾಳಿ ಸಹ ಶರೀರಕ್ಕೆ ಬಹಳ ಒಳ್ಳೆಯದೆಂದು ನಮ್ಮ ಉಪಾಧ್ಯಾಯರು ಹೇಳಿರುವರು. ಗೋವಿಂದಾ! ಹೋಗು, ಒಂದು ತಂಬಿಗೆ ನೀರು ತೆಗೆದುಕೊಂಡು ಬಾ! ಭೋಲಾ! ನೀನು ಹೋಗಿ ದೊಡ್ಡದೊಂದು ಗಳವನ್ನು ತೆಗೆದುಕೊಂಡು ಬಾ! ಗಿಡದ ಸುತ್ತಲೂ ಎತ್ತರವಾಗಿ ಬಿದಿರಿನ ಬೇಲಿಯನ್ನು ಕಟ್ಟಬೇಕು, ಇಲ್ಲದಿದ್ದರೆ ಹಸು-ಕರುಗಳು ಮೇದುಬಿಡುವುವು.

ದಿಗಂಬರಿಗೆ ಮತ್ತಷ್ಟು ಕೋಪವುಂಟಾಯಿತು ಇವನ ಮಾತುಗಳಿಂದ ಅವಳ ಮೈಯೆಲ್ಲ ಉರಿಯತೊಡಗಿತು. "ಅಂಗಳದಲ್ಲಿ ಅರಳಿಯ ಗಿಡವೇ? ಪ್ರಪಂಚದಲ್ಲಿ ಯಾರೂ ಮಾಡದ ವಿಚಿತ್ರ ಕೆಲಸ! ಮನೆಯಲ್ಲಿ ಅರಳಿಯ ಗಿಡ ನಡುವುದನ್ನು ನಾನು ಇಲ್ಲಿಯೇ ನೋಡಿದ್ದು!" ಎಂದಳು

ರಾಮ ಅವಳ ಮಾತುಗಳು ಕೇಳಿಸಿದರೂ ಕೇಳಿಸದವನಂತೆ ಸುಮ್ಮನಿದ್ದ.

ಗೋವಿಂದನು ತನ್ನ ಪುಟ್ಟ ಕೈಗಳ ಶಕ್ತಿ-ಸಾಮರ್ಥ್ಯಗಳಿಗನುಸಾರವಾಗಿ ಪುಟ್ಟದೊಂದು ತಂಬಿಗೆಯಲ್ಲಿ ನೀರು ತಂದ. ರಾಮ ಅವನ ಕೈಯಿಂದ ತಂಬಿಗೆಯನ್ನು ತೆಗೆದುಕೊಂಡು, ಪ್ರೀತಿಯಿಂದ ನಗುತ್ತ ಹೇಳಿದ: ಇಷ್ಟು ಸ್ವಲ್ಪ ನೀರಿನಿಂದ ಏನಾಗುವುದೋ, ಹುಚ್ಚ!— ನೀನು ಇಲ್ಲೇ ಸಿರತಿರು; ನಾನು ಹೋಗಿ ನೀರು ತರುವೆನು.

ಅಂತೂ ಬಿಂದಿಗೆ-ಬಿಂದಿಗೆಗಳ ನೀರನ್ನು ಸುರಿದು, ಅಂಗಳವನ್ನೆಲ್ಲಾ ಕೊಚ್ಚೆ ಮಾಡಿ, ಈ ಭಾರಿಯ ವೃಕ್ಷಾರೋಪಣ ಕಾರ್ಯವನ್ನು ಮುಗಿಸುವ

ಸಮಯಕ್ಕೆ ಸರಿಯಾಗಿ ನಾರಾಯಣಿಯು ನದಿಯಿಂದ ಸ್ನಾನ ಮಾಡಿಕೊಂಡು ಹಿಂತಿರುಗಿದಳು. ಇದುವರೆಗೂ ದಿಗಂಬರಿಯು ಬುಸುಗುಡುವ ನಾಗಪ್ಪನಂತೆ ಮನಸ್ಸಿನಲ್ಲೇ ಕುದಿಯುತ್ತಿದ್ದಳು. ಮಗಳ ಮುಖವನ್ನು ಕಾಣುತ್ತಲೇ ಕೂಗಿ ಹೇಳಿದಳು: ನೋಡು! ನಿನ್ನ ಮೈದುನನ ಕೃತ್ಯಗಳನ್ನು ಕಣ್ಣಾರೆ ನೋಡು! ಅಂಗಳದ ಮಧ್ಯದಲ್ಲಿ ಅರಳಿಯ ಗಿಡವನ್ನು ನಟ್ಟು, ಬಹಳ ಒಳ್ಳೆಯ ನೆರಳಾಗುವುದೆಂದು ಹೇಳುತ್ತಿರುವನು! ಸ್ವಲ್ಪ ಹಿಂತಿರುಗಿ ನೋಡು, ಆ ನೀಚ ಭೋಲನ ಕೆಲಸವನ್ನು !— ಬಿದಿರಿನ ಮೆಳೆಯನ್ನೇ ಕಿತ್ತು ಎಳೆದು ತರುತ್ತಿರುವನು ! ಬೇಲಿ ಕಟ್ಟುವುದಕ್ಕಂತೆ !!

ನಾರಾಯಣಿಯು ಹಿಂತಿರುಗಿ ನೋಡಲಾಗಿ, ನಿಜವಾಗಿಯೂ ಭೋಲನು ಬಿದಿರಿನ ಕಟ್ಟು ಕಟ್ಟುಗಳನ್ನೇ ಎಳೆದು ತರುತ್ತಿದ್ದ! ಭೋಲ ಮತ್ತು ರಾಮನ ವಯಸ್ಸು ಸುಮಾರು ಒಂದೇ ಆಗಿತ್ತು. ನಾರಾಯಣಿಯು ಇದೆಲ್ಲವನ್ನೂ ನೋಡಿ ನಗಲಾರಂಭಿಸಿದಳು. ಒಂದೆಡೆ ಮಾತೆಯ ಕ್ರೋಧ-ಭರಿತ ವ್ಯಸ್ತ ಭಾವ! ಮತ್ತೊಂದೆಡೆ ರಾಮನ ಈ ಹುಚ್ಚುತನ! ಈ ಎಲ್ಲ ದೃಶ್ಯಗಳು ಅವಳ ಮನಸಿಗೆ ಪರಮ ಹಾಸ್ಯಕರವಾಗಿ ಪ್ರತೀತವಾದುವು. "ಅಂಗಳದಲ್ಲಿ ಅರಳಿಯ ಗಿಡವನ್ನು ನಡುವುದರಿಂದ ಏನಾಗುವುದೋ ?" ಎಂದಳು ನಗುತ್ತ.

ರಾಮನು ಆಶ್ಚರ್ಯದಿಂದ ಹೇಳಿದ: ಏನಾಗುವುದೇ ? ಎಷ್ಟು ಒಳ್ಳೆಯ ತಂಪಾದ ನೆರಳುಂಟಾಗುವುದು! ಈಗ ನೀನು ನೋಡುತ್ತಿರುವ ಇದೇ ಪುಟ್ಟ ಕೊಂಬೆಯು ದೊಡ್ಡದಾದ ಮೇಲೆ—ಏ ಗೋವಿಂದಾ! ಬೆರಳು ತೋರಿಸ ಬೇಡ! ತೋರಿಸಿದರೆ ಬೆಳೆಯುವುದಿಲ್ಲ!—ದೊಡ್ಡದಾದ ಮೇಲೆ ಅದಕ್ಕೆ ಉಯ್ಯಾಲೆ ಕಟ್ಟುವೆನು; ಗೋವಿಂದನೂ ನಾನೂ ಮನದಣಿಯೆ ತೂಗಿಕೊಳ್ಳುವೆವು! ಏ ಭೋಲಾ! ಗಡಾರಿ ತೆಗೆದುಕೊಂಡು ಬಾ! ಬೇಲಿಯನ್ನು ಸ್ವಲ್ಪ ಎತ್ತರವಾಗಿ ಕಟ್ಟಬೇಕು; ಇಲ್ಲದಿದ್ದರೆ ನಮ್ಮ ಕಪ್ಪು ಕರುವು ಎಲ್ಲವನ್ನೂ ಮೇದುಬಿಡುವುದು.

ನಾರಾಯಣಿಯು ನಗುತ್ತ, ಅಡಿಗೆಯ ಮನೆಗೆ ಹೊರಟುಹೋದಳು.

ದಿಗಂಬರಿಯ ಕಣ್ಣುಗಳು ಕ್ರೋಧದಿಂದ ಕೆಂಡದಂತಾದುವು. ರೋಷ ಪೂರ್ಣ ದೃಷ್ಟಿಯಿಂದ ಮಗಳನ್ನು ದುರ ದುರ ನೋಡುತ್ತ "ನೀನೇನೂ

ಹೇಳಲಿಲ್ಲವೇ? ಹಾಗಿದ್ದರೆ, ಅಂಗಳದಲ್ಲೇ ಅರಳಿಯ ಗಿಡವನ್ನು ನಟ್ಟಿರಲೇ?" ಎಂದಳು.

ನಾರಾಯಣಿಯು ನಗುತ್ತ ಉತ್ತರವಿತ್ತಳು; ನೀನು ಇಷ್ಟೇಕೆ ಗಾಬರಿಗೊಳ್ಳುತ್ತೀ, ಅಮ್ಮಾ! ಅಷ್ಟು ದೊಡ್ಡ ಮರವು ನಿಜವಾಗಿಯೂ ಇಲ್ಲಿ ಬೆಳೆಯುವುದೇ? ಅದರಲ್ಲಿ ಬೇರು ಸಹ ಇಲ್ಲ; ಬಿಂದಿಗೆ-ಬಿಂದಿಗೆ ನೀರು ಸುರಿದರೂ ಬೆಳೆಯುವುದಿಲ್ಲ! ನಾಳೆಯೇ ಒಣಗಿಹೋಗುವುದು!

ಈ ಉತ್ತರದಿಂದ ದಿಗಂಬರಿಯ ಮನಸ್ಸು ಸ್ವಲ್ಪವೂ ಶಾಂತವಾಗಲಿಲ್ಲ "ಒಣಗಿಹೋಗುವ ವಿಷಯ ಹಾಗಿರಲಿ? ನಿಜವಾಗಿಯೂ ನೀನು ಎಲ್ಲರ ಹಿತ ಕೋರುವುದಾದರೆ, ಅದನ್ನು ಈ ಕ್ಷಣ ಕಿತ್ತು ಬಿಸಾಡು!" ಎಂದಳು.

ನಾರಾಯಣಿಯು ಈ ಮಾತನ್ನು ಕೇಳಿ, ಬೆಚ್ಚಿ ಉತ್ತರವಿತ್ತಳು; ಅಬ್ಬಾ! ಹಾಗೇನಾದರೂ ಮಾಡಿಬಿಟ್ಟರೆ, ಈ ಮನೆಯಲ್ಲಿ ಇರುವುದೇ ಕಷ್ಟವಾಗಿಬಿಡುವುದು!

"ಏಕೆ? ಮನೆಯೇನು ಅವನದೇ, ಮನಸ್ಸು ಬಂದಂತೆ ಮಾಡುವುದಕ್ಕೆ? ಈ ಮನೆಗೆ ನೀನಾರೂ ಅಲ್ಲವೆ? ನನ್ನ ಗೋವಿಂದನೂ ಯಾರೂ ಅಲ್ಲವೇ? ಹೇ ಭಗವಂತ! ಅರಳಿಯ ಮರದ ಮೇಲೆ ಊರಲ್ಲಿರುವ ಕಾಗೆ-ಗೂಗೆ-ಹದ್ದುಗಳೆಲ್ಲ ಮನೆ ಮಾಡಿಕೊಳ್ಳುವುವು— ಎಲುಬು-ಮಾಂಸಗಳ ತುಂಡನ್ನು ತಂದು ಹಾಕಿ ಅಂಗಳವನ್ನೆಲ್ಲ ಹಾಳು ಮಾಡುವುವು,— ನಾರಾಯಣಿ! ನಾನಿನ್ನು ಇಲ್ಲಿರಲಾರೆ! ನೀನು ಆ ಪೋರನಿಗೆ ಇಷ್ಟೊಂದು ಹೆದರಿಕೊಳ್ಳುವ ಕಾರಣವಾದರೂ ಏನು, ಹೇಳು! ಇದೇನಾದರೂ ನನ್ನ ಮನೆಯಾಗಿದ್ದರೆ, ಆಗ ತೋರಿಸುತ್ತಿದ್ದೆ!— ಒಂದೇ ದಿನದಲ್ಲಿ ಅವನ ಪುಂಡತನವನ್ನೆಲ್ಲಾ ಅಡಗಿಸುತ್ತಿದ್ದೆ!"

ನಾರಾಯಣಿಗೆ ಮಾತೆಯ ಮನೋಭಿಪ್ರಾಯವು—ಕನ್ನಡಿಯಲ್ಲಿನ ಮುಖದಂತೆ—ಸ್ಪಷ್ಟವಾಗಿ ಗೋಚರವಾಯಿತು. ತುಸು ಹೊತ್ತು ಸುಮ್ಮನಿದ್ದು, ಒಮ್ಮೆ ಗೊಳ್ಳನೆ ನಕ್ಕು ಹೇಳಿದಳು: ಅವನಿನ್ನೂ ಚಿಕ್ಕ ಹುಡುಗ, ಅಮ್ಮಾ! ಇನ್ನೂ ತಿಳಿವಳಿಕೆಯುಂಟಾಗಿಲ್ಲ; ಇದ್ದಿದ್ದರೆ, ಅಂಗಳದಲ್ಲಿ ಅರಳಿಯ ಗಿಡವನ್ನು ನಡುತ್ತಿದ್ದನೇ? ಒಂದೆರಡು ದಿನ ಹಾಗೆಯೇ ಇರಲಿ; ನಂತರ ಅವನೇ ಕಿತ್ತು ಬಿಸುಡುವನು!

“ ಕಿತ್ತು ಬಿಸುಡುವನೇ ಅವನು ? ಎಂದಿಗೂ ಇಲ್ಲ ! ಇದೋ, ನಾನೇ ಕಿತ್ತಿಸೆದು ಒರುವೆನು ” ಎಂದಳು ದಿಗಂಬರಿ.

“ ಬೇಡವಮ್ಮಾ, ಹಾಗೆ ಮಾಡಬೇಡ ! ನಿನಗೆ ಅವನ ಸ್ವಭಾವ ಗೊತ್ತಿಲ್ಲ. ನಾನು ಮೊದಲಿನಿಂದಲೂ ನಿನಗೆ ಹೇಳುತ್ತಿರುವೆನು. ನನ್ನೊಬ್ಬಳ ಹೊರತು, ಅವರ ಅಣ್ಣನಿಗೆ ಸಹ ಅವನನ್ನು ಮುಟ್ಟುವಷ್ಟು ಸಾಹಸವಿಲ್ಲ ! ಈವೊತ್ತು ಒಂದು ದಿನ ಮಾತ್ರ ಆ ಗಿಡ ಅಲ್ಲೇ ಇರಲಿ; ನಾಳೆ ನೋಡಿಕೊಳ್ಳೋಣ ! ”

ದಿಗಂಬರಿಯು ಕೋಪದಿಂದ ನುಡಿದಳು: ಹಾಗೆಯೇ ಆಗಲಿ ! ನೀನು ಹೋಗಿ, ಸೀರೆಯನ್ನುಟ್ಟುಕೋ

ಮಧ್ಯಾಹ್ನದ ಸಮಯ ನಾರಾಯಣಿಯು ತನ್ನ ಕೊಠಡಿಯಲ್ಲಿ ಕುಳಿತು ದಿಂಬಿನ ಚೀಲವನ್ನು ಹೊಲಿಯುತ್ತಿದ್ದಳು. ಅಷ್ಟರಲ್ಲಿ ದಾಸಿಯು ಓಡಿ ಬಂದು “ಬಹೂಜೀ ! ಅಜ್ಜಿಯವರು ಚಿಕ್ಕ ಬಾಬುವಿನ ಗಿಡವನ್ನು ಕಿತ್ತು ಎಸೆದುಬಿಟ್ಟರು; ಸರ್ವನಾಶ ಮಾಡಿಬಿಟ್ಟರು ! ಇನ್ನು ಸಂಜೆಗೆ ಚಿಕ್ಕ ಬಾಬು ಗಳು ಶಾಲೆಯಿಂದ ಬಂದೊಡನೆಯೇ ಎಲ್ಲರ ಪ್ರಾಣವನ್ನೂ ಹಿಂಡಿಬಿಡುವರು. ಯಾರನ್ನೂ ಸುಮ್ಮನೆ ಬಿಡುವುದಿಲ್ಲ ! ” ಎಂದಳು.

ನಾರಾಯಣಿಯು ಹೊಲಿಯುತ್ತಿದ್ದ ದಿಂಬಿನ ಚೀಲವನ್ನು ಹಾಗೆಯೇ ಬಿಟ್ಟು, ಹೊರಕ್ಕೆ ಹೋಗಿ ನೋಡಿದಳು !— ವಾಸ್ತವವಾಗಿಯೂ ಗಿಡ ಅಲ್ಲಿರಲಿಲ್ಲ.

“ ಅಮ್ಮಾ ! ರಾಮನ ಗಿಡ ಏನಾಯಿತು ? ” ಎಂದು ಕೇಳಿದಳು ತಾಯಿಯನ್ನು.

ದಿಗಂಬರಿಯು ಹಂಡೆಯ ಗಾತ್ರ ಮುಖ ಮಾಡಿಕೊಂಡು, ಬೊಟ್ಟಿನಿಂದ ತೋರಿಸುತ್ತ “ ಅದೋ ! ಅಲ್ಲಿ ಬಿದ್ದಿದೆ ! ” ಎಂದಳು.

ನಾರಾಯಣಿಯು ಸಮೀಪಕ್ಕೆ ಹೋಗಿ ನೋಡಿದಳು. ದಿಗಂಬರಿಯು ಗಿಡವನ್ನು ಸುಮ್ಮನೆ ಕಿತ್ತು ಬಿಸುಟಿರಲಿಲ್ಲ; ಅದನ್ನು ಮುರಿದು ತುಂಡು-ತುಂಡು ಮಾಡಿ, ನಾಶ ಮಾಡಿದ್ದಳು. ನಾರಾಯಣಿಯು ಮರು ಮಾತಾಡದೆ, ಅದನ್ನು ಅಲ್ಲಿಂದ ಎತ್ತಿ ದೂರ ಬಿಸಾಡಿ, ತನ್ನ ಕೊಠಡಿಯೊಳಕ್ಕೆ ಹೊರಟು ಹೋದಳು.

ಶಾಲೆಯಿಂದ ಮನೆಗೆ ಬಂದೊಡನೆಯೇ ರಾಮು ಮೊದಲು ತನ್ನ ಗಿಡವನ್ನು ನೋಡಿದ. ಗಿಡವನ್ನು ಕಾಣದೆ, ಅಂಗಳವೆಲ್ಲ ಎಗರಾಡಿದ. ಪಾಟಿ-ಪುಸ್ತಕಗಳನ್ನು ಅಲ್ಲೇ ಎಸೆದು "ಅತ್ತಿಗೆ! ನನ್ನ ಗಿಡ ಎಲ್ಲಿ?" ಎಂದು ಕೂಗಿಕೊಂಡ

ನಾರಾಯಣಿಯು ಅಡಿಗೆಯ ಮನೆಯಿಂದ ಹೊರಗೆ ಬಂದು "ಹೇಳುನು, ಇಲ್ಲಿ ಬಾ!" ಎಂದು ರಾಮನನ್ನು ಬಳಿಗೆ ಕರೆದಳು.

"ಇಲ್ಲ, ನಾನು ಬರುವುದಿಲ್ಲ! ಮೊದಲು ಹೇಳು, ನನ್ನ ಗಿಡವೆಲ್ಲಿ?"

"ನನ್ನ ಬಳಿಗೆ ಮೊದಲು ಬಾ! ನಂತರ ಹೇಳುವೆನು!"

ರಾಮನು ಸಮೀಪಕ್ಕೆ ಬರುತ್ತಲೇ, ಅವನ ಕೈ ಹಿಡಿದು ಕೊಠಡಿಗೆ ಕರೆದುಕೊಂಡು ಹೋದಳು ತೊಡೆಯ ಮೇಲೆ ಕುಳ್ಳಿರಿಸಿಕೊಂಡು, ಪ್ರೀತಿಯಿಂದ ತಲೆಯ ಮೇಲೆ ಕೈಯಾಡಿಸುತ್ತ "ಮಂಗಳವಾರದ ದಿನ ಅರಳಿಯ ಗಿಡವನ್ನು ನಡುವರೇ, ಹುಚ್ಚ!" ಎಂದಳು.

ರಾಮನು ಸ್ವಲ್ಪ ಶಾಂತನಾಗಿ "ಏಕೆ, ಏನಾಗುವುದು?" ಎಂದು ಕೇಳಿದ.

ನಾರಾಯಣಿಯು ನಕ್ಕು ಹೇಳಿದಳು: ಮನೆಯ ದೊಡ್ಡ ಸೊಸೆಯು ಸತ್ತು ಹೋಗುವಳು; ಮಂಗಳವಾರ ನೆಡಬಾರದು!

ಕ್ಷಣಕಾಲ ರಾಮನ ಮುಖ ಪೆಚ್ಚಾಯಿತು. ಅವನೆಂದ: ಇಲ್ಲ! ನೀನು ಸುಳ್ಳು ಹೇಳುತ್ತಿರುವೆ!

ನಾರಾಯಣಿಯು ಪುನಃ ಅದೇ ನಗುಮುಖದಿಂದ "ಅತ್ತಿಗೆ ಎಂದಿಗಾದರೂ ಸುಳ್ಳು ಹೇಳುವಳೇ?— ಶಾಸ್ತ್ರಗಳಲ್ಲಿ ಬರೆದಿರುವುದು ಸುಳ್ಳೇ?" ಎಂದಳು

"ಎಲ್ಲಿ? ಆ ಶಾಸ್ತ್ರವನ್ನು ತೋರಿಸು, ನೋಡೋಣ!"

ನಾರಾಯಣಿಗೆ ನಿಜವಾಗಿಯೂ ಗಾಬರಿಯಾಯಿತು. ಚಟ್ಟನೆ ಅವಳು ಮುಖಭಾವವನ್ನು ಬದಲಾಯಿಸಿ, ಆಶ್ಚರ್ಯವನ್ನು ತೋರ್ಪಡಿಸುತ್ತ— 'ಛೀ! ನೀನೆಂತಹ ಹುಡುಗ! ಮಂಗಳವಾರದ ದಿನ ಶಾಸ್ತ್ರದ ಹೆಸರನ್ನು ಸಹ ಹೇಳಬಾರದು. ಹೀಗಿರುವಲ್ಲಿ ನೀನು ನೋಡುವೆಯೇನು? ಈ ವಿಷಯ

ಭೋಲನಿಗೆ ಸಹ ಗೊತ್ತು! ಅವನನ್ನು ಬೇಕಾದರೆ ಕರೆದು ಕೇಳು" ಎಂದಳು.

ತನ್ನ ಇಷ್ಟು ದೊಡ್ಡ ಮೂರ್ಖತನವು ಭೋಲನೆದುರಿಗೆ ಎಲ್ಲಿ ಪ್ರಕಟವಾಗುವುದೋ—ಎಂದು ರಾಮ ಹೆದರಿದ. ಮತ್ತು ಮಾತೃಸದೃಶಳಾದ ಅತ್ತಿಗೆಯ ಕಂಠವನ್ನು ತನ್ನ ಎರಡು ಬಾಹುಗಳಿಂದಲೂ ಪ್ರೀತಿಯಿಂದ ಬಿಗಿದಪ್ಪಿ, ಮುಖವನ್ನು ಮುಚ್ಚಿಕೊಂಡು ಹೇಳಿದ : ಗೊತ್ತು, ಅದು ನನಗೂ ಗೊತ್ತು! ಅತ್ತಿಗೆ, ಅದನ್ನು ಒಮ್ಮೆ ಕಿತ್ತು ಬಿಸುಟ ನಂತರ, ಅದರ ದೋಷವೇನೂ ಇಲ್ಲವಷ್ಟೆ?

ನಾರಾಯಣಿಯು ಅವನ ಮುಖವನ್ನು ಹೃದಯಕ್ಕಪ್ಪಿಕೊಂಡು ಪ್ರೀತಿಯಿಂದ ಹೇಳಿದಳು : ಇಲ್ಲ, ಇನ್ನೇನೂ ದೋಷವಿಲ್ಲ!—ಅವಳ ನಯನಗಳು ಕಂಬನಿದುಂಬಿದುವು. ಮೃದು-ಮಧುರ ಸ್ವರದಿಂದ ಮತ್ತೆಂದಳು : ನಾನು ಮೃತಿ ಹೊಂದಿದರೆ ನೀನೇನು ಮಾಡುವೆ?

ರಾಮನು ಜೋರಾಗಿ ತಲೆಯಲ್ಲಾಡಿಸಿ ಹೇಳಿದ: ಛಿಃ! ಇಲ್ಲ! ಹಾಗೆಲ್ಲ ಹೇಳಬೇಡ!

ನಾರಾಯಣಿಯು ಮರೆಯಿಂದ ಕಣ್ಣೊರಸಿಕೊಳ್ಳುತ್ತ ಹೇಳಿದಳು : ಮುದುಕಿಯಾಗುತ್ತ ಬಂದೆ; ಇನ್ನು ಮೃತಿಹೊಂದದೆ ಮತ್ತೇನು?

ತಮಾಷೆಗೆ ಈ ಮಾತನ್ನು ಹೇಳುತ್ತಿರುವಳೆಂದು ರಾಮ ತಿಳಿದುಕೊಂಡು ನಗುತ್ತ ಹೇಳಿದ : ನೀನು ಮುದುಕಿಯಾದೆಯಾ? ಇನ್ನೂ ಹಲ್ಲುಗಳೇ ಬಿದ್ದಿಲ್ಲ! ಒಂದು ತಲೆಕೂದಲು ಸಹ ನರೆತಿಲ್ಲ!

"ತಲೆಕೂದಲು ನರೆಯದಿದ್ದರೇನು? ಎಂದಾದರೊಂದು ದಿನ ನದಿಯಲ್ಲಿ ಬಿದ್ದು ಪ್ರಾಣ ಬಿಡುವೆನು! ಸ್ನಾನ ಮಾಡಲು ಹೋಗಿ, ಹಿಂತಿರುಗುವುದೇ ಇಲ್ಲ!"

"ಏಕೆ, ಅತ್ತಿಗೆ?"

"ಏಕೇ? ಎಲ್ಲವೂ ನಿನ್ನಿಂದ! ನಮ್ಮ ತಾಯಿಯು ಹಗಲು-ರಾತ್ರಿ ಜಗಳವಾಡುತ್ತಿರುವುದನ್ನು ನೀನು ನೋಡುವುದಿಲ್ಲವೇ? ನಾನು ಎಂದು ಯಿಂದ ಹಿಂತಿರುಗಿ ಬರುವುದಿಲ್ಲವೋ ಅಂದು ಗೊತ್ತಾಗುವುದು!"

ಈ ಮಾತಿನಲ್ಲಿ ರಾಮನಿಗೆ ನಂಬಿಕೆಯುಂಟಾಗದಿದ್ದರೂ, ಅದು ಅವನ ಮನಸ್ಸಿಗೆ ತಾಕಿತು. ಅವನೆಂದ: ಇಲ್ಲ, ಅತ್ತಿಗೆ! ಇನ್ನು ಮುಂದೆ ನಾನು ಅವರಿಗೆ ಏನೂ ಅನ್ನುವುದಿಲ್ಲ. ಆದರೆ ಅವರೇಕೆ ನನ್ನನ್ನು ರೇಗಿಸುವರು?

"ರೇಗಿಸಿದರೆ ರೇಗಿಸಲಿ! ಅವರು ನನ್ನ ಮಾತೆಯಲ್ಲವೇ? ಮನೆಗೆ ದೊಡ್ಡವರಲ್ಲವೇ? ನನ್ನನ್ನು ಯಾವ ರೀತಿ ಪ್ರೀತಿಯಿಂದ ಕಾಣುವೆಯೋ ಅದೇ ರೀತಿ ನೀನು ಅವರನ್ನೂ ಪ್ರೀತಿಯಿಂದ ಕಾಣಬೇಕು, ತಿಳಿಯಿತೇ?'

ರಾಮನು ಪುನಃ ಅತ್ತಿಗೆಯ ಹೃದಯದಲ್ಲಿ ಮುಖವನ್ನು ಮರೆಸಿಕೊಂಡ ಇದೇ ಹೃದಯದಲ್ಲಿ ಮುಖವನ್ನಿಟ್ಟುಕೊಂಡು, ಅವನು ತನ್ನ ಹದಿಮೂರು, ವರ್ಷಗಳನ್ನು ಕಳೆದಿರುವನು— ಇಷ್ಟು ದೊಡ್ಡವನಾಗಿರುವನು. ಅಂದ ಬಳಿಕ, ಅವಳ ಸಂಗಡಲೇ ಅಷ್ಟು ದೊಡ್ಡ ಸುಳ್ಳನ್ನು ಹೇಳಲು ಅವನಿಗೆ ಸಾಧ್ಯವಾಗಲಿಲ್ಲ!

ನಾರಾಯಣಿಯು ರುಂಧಿತ ಕಂಠದಿಂದ ಹೇಳಿದಳು. ಮುಖ ಮುಚ್ಚಿಕೊಳ್ಳುವುದರಿಂದ ಏನಾಗುವುದು, ಹೇಳು!

ಈ ಹೊತ್ತಿಗೆ ಸರಿಯಾಗಿ ದಿಗಂಬರಿಯು ಅಲ್ಲಿಗೆ ಬಂದಳು. ತನ್ನ ಕಠೋರ ಸ್ವರದಲ್ಲಿ ಸ್ವಲ್ಪ ಮಧುರತೆಯನ್ನು ಬೆರಸಿ ಅವಳೆಂದಳು: ನಿನಗೇನೂ ಬೇರೆ ಕೆಲಸವಿಲ್ಲವೇ, ನಾರಾಯಣಿ! ಇಲ್ಲಿ ಮೈದುನನನ್ನು ಕೂಡಿಸಿಕೊಂಡು ಲಾಲಿಸಿ–ಮುದ್ದಾಡುತ್ತಿರುವೆ ಅಲ್ಲಿ ನಿನ್ನ ಹುಡುಗನಿಗಾಗಿರುವ ದುರ್ದೆಶೆಯನ್ನಾದರೂ ನೋಡು! ರಾಮನು ಒಡನೆಯೇ ತಲೆಯೆತ್ತಿ ನೋಡಿದ ಹಸಿದ ಹುಲಿಯಂತೆ ಅವನ ಕಣ್ಣುಗಳು ಹಾತೊರೆಯತೊಡಗಿದುವು.

ನಾರಾಯಣಿಯು ರಾಮನ ಎತ್ತಿದ್ದ ತಲೆಯನ್ನು ಬಲಾತ್ಕಾರದಿಂದ ತನ್ನ ಹೃದಯದ ಕಡೆಗೆಳೆದುಕೊಂಡು, ತಾಯಿಯನ್ನು ಕೇಳಿದಳು: ದುರ್ದೆಸೆ ಏನು? ಏಕೆ, ಹುಡಗನಿಗೇನಾಯಿತು?

"ಏನೆಂದು ಕೇಳುತ್ತಿರುವೆಯಾ? ಆಗಲಿ!" ಎನ್ನುತ್ತ ದಿಗಂಬರಿಯು ಅಲ್ಲಿಂದ ಹೊರಟಳು ಏನಾದರೊಂದು ಸುಳ್ಳು ಉತ್ತರವನ್ನು ಕಲ್ಪಿಸಿ ಹೇಳಲು ಸಹ ಅವಳಿಗೆ ಸಾಧ್ಯವಾಗಲಿಲ್ಲ.

ರಾಮನು ಬಲಾತ್ಕಾರದಿಂದ ತಲೆಯನ್ನು ಮೇಲಕ್ಕೆತ್ತಿ ಹೇಳಿದ: ಈ ಪಿಶಾಚಿ ಮುದುಕಿಯ ಸೊಂಟ ಮುರಿದುಬಿಡುವೆನು!

ನಾರಾಯಣಿಯು ಅವನ ಬಾಯನ್ನು ಮುಚ್ಚಿ "ಪಾಪಿ ಮುಂಡೇದೇ! ಸುಮ್ಮನಿರು! ಅವರು ತಾಯಿಯಲ್ಲವೇ?" ಎಂದಳು.

ನಾಲ್ಕೈದು ದಿನಗಳ ನಂತರ, ಒಂದು ದಿನ ರೊಟ್ಟಿಯನ್ನು ತಿನ್ನುತ್ತಿರುವಾಗ ರಾಮು ಬಿಕ್ಕಿ ಬಿಕ್ಕಿ ಅಳತೊಡಗಿದ. ಎರಡು ಮೂರು ಸಲ ನೀರು ಕುಡಿದು, ತಟ್ಟೆಯನ್ನು ಕುಕ್ಕರಿಸಿ ಎದ್ದು ನಿಂತು, ಎಗರಾಡತೊಡಗಿದ. "ಈ ಪಿಶಾಚಿಯ ಕೈಯ ಊಟವನ್ನು ನಾನು ತಿನ್ನಲಾರೆ! ಇನ್ನೆಂದಿಗೂ ತಿನ್ನುವುದಿಲ್ಲ! ಮೆಣಸಿನಕಾಯಿಗಳಿಂದ ಬಾಯಿ-ನಾಲಿಗೆಯೆಲ್ಲ ಉರಿದುಹೋದವು! ಅತ್ತಿಗೆ! ಓ ಅತ್ತಿಗೆ!" ಎಂದು ಕೂಗಿಕೊಂಡ.

ನಾರಾಯಣಿಯು ದೇವರ ಪೂಜೆ ಮಾಡುತ್ತಿದ್ದಳು ಈ ಗಲಾಟೆಯನ್ನು ಕೇಳಿ ಎದ್ದು ಬಂದು "ಏಕೆ? ಏನಾಯಿತೋ!" ಎಂದು ಕೇಳಿದಳು

ರಾಮುನು ಸಿಟ್ಟಿನಿಂದ ಅಳುತ್ತ ಹೇಳಿದ: ನಾನು ಊಟ ಮಾಡುವುದಿಲ್ಲ. ಅವಳ ಕೈ-ಅಡಿಗೆಯನ್ನು ನಾನೆಂದೂ ಊಟ ಮಾಡುವುದಿಲ್ಲ. ಅವಳನ್ನು ಇಲ್ಲಿಂದ ಕಳುಹಿಸಿಬಿಡು!—ಎನ್ನುತ್ತ, ಅಲ್ಲಿಂದ ಎದ್ದು ಊಟ ಮಾಡದೆ ಹೊರಟುಹೋದ!

ನಾರಾಯಣಿಯು ತುಸು ಹೊತ್ತು ಚಕಿತಳಾಗಿ ಸುಮ್ಮನೆ ನಿಂತಿದ್ದು, ನಂತರ ತಾಯಿಯೊಡನೆ ಹೇಳಿದಳು: ಅಮ್ಮ! ನಾನು ನಿನಗೆ ಬಾರಿ ಬಾರಿಗೂ ಹೇಳುತ್ತಿರುವೆನು— ತರಕಾರಿಗೆ ಹೆಚ್ಚು ಮೆಣಸಿನಕಾಯಿ ಹಾಕಬೇಡವೆಂದು! ಈ ಮನೆಯಲ್ಲಿ ಇಷ್ಟೊಂದು ಖಾರ ತಿನ್ನುವ ಅಭ್ಯಾಸ ಯಾರಿಗೂ ಇಲ್ಲ

ದಿಗಂಬರಿಯು ಕ್ರೋಧದಿಂದ ಕಿಡಿಕಿಡಿಯಾಗಿ ಹೇಳಿದಳು: ಹೆಚ್ಚು ಮೆಣಸಿನಕಾಯಿಯನ್ನು ನಾನು ಹಾಕಿದ್ದರಲ್ಲವೇ? ಒಂದೆರಡು ಮೆಣಸಿನಕಾಯಿ ಒಗ್ಗರಣೆಗೆ ಹಾಕಿದ್ದಕ್ಕೆ ಇಷ್ಟೊಂದು ಹಾಹಾಕಾರವೇ!

"ಅದನ್ನು ತಾನೇ ಏಕೆ ಹಾಕಬೇಕು? ಹಾಕದಿದ್ದರೆ ಏನು ಕಡಿಮೆಯಾಗುವುದು? ಖಾರ ಹೆಚ್ಚಾದರೆ ಯಾರೂ ಊಟ ಮಾಡುವುದಿಲ್ಲವೆಂದು ಹೇಳುತ್ತಿರುವೆನು!"

"ಸಾಕು ಸುಮ್ಮನಿರು, ನಾರಾಯಣೀ! ಸುಮ್ಮನಿರು! ನನಗೆ ಅಡಿಗೆ ಹೇಳಿಕೊಡಲು ಬಂದೆಯಾ? ಅಡಿಗೆ ಮಾಡುತ್ತ ಮಾಡುತ್ತ ತಲೆ ಕೂದಲು

ಬೆಳ್ಳಗಾಯಿತು! ಈಗ ಮಗಳ ಕೈಯಿಂದ ಅಡಿಗೆಯನ್ನು ಕಲಿತುಕೊಳ್ಳಬೇಕೇ? ಧಿಕ್ಕಾರ, ಧಿಕ್ಕಾರ!"

ನಾರಾಯಣಿಯು ಏನೂ ಉತ್ತರ ಕೊಡಲಿಲ್ಲ. ನೆಟ್ಟಗೆ ಅಡಿಗೆಯ ಮನೆಗೆ ಹೋಗಿ ಪುನಃ ಕೆಲಸಕ್ಕೆ ಶುರು ಮಾಡಿದಳು.

ದಿಗಂಬರಿಯು ಬಾಗಿಲ ಬಳಿ ಕಾಲುಗಳನ್ನು ಚಾಚಿಕೊಂಡು, ತಲೆಯ ಮೇಲೆ ಕೈಯಿಟ್ಟುಕೊಂಡು ಕುಳಿತುಬಿಟ್ಟಳು, ಮತ್ತು ಜೋರಾಗಿ ಕೂಗಿಕೊಳ್ಳ ತೊಡಗಿದಳು: ಅಯ್ಯೋ, ದೈವವೇ! ನಾನಿನ್ನು ಸಹಿಸಲಾರೆ! ನನಗೆ ಬೇಗ ಸಾವನ್ನಾದರೂ ಕೊಡು! ಪ್ರತಿಯೊಬ್ಬರೂ ಅವರವರ ಬಾಯಿಗೆ ಬಂದ ಬೈಗಳನ್ನೇ ಬೈಯುತ್ತಿರುವರು—ನಾನು ಮುದುಕಿಯಂತೆ; ಪಿಶಾಚಿಯಂತೆ; ನನ್ನನ್ನು ಇಲ್ಲಿಂದ ಕಳುಹಿಸಿಬಿಡಬೇಕಂತೆ! ಮಗಳ ಮತ್ತು ಅಳಿಯನ ಮನೆಗೆ ಅನ್ನಕ್ಕೆ ಗತಿಗೆಟ್ಟು ಬಂದಿರುವೆನು! ಅಯ್ಯೋ! ಈ ನೀಚಬಾಳಿಗಿಂತ, ಭಿಕ್ಷೆ ಬೇಡಿ ಹೊಟ್ಟೆ ಹೊರೆದರೂ ಎಷ್ಟೋ ಉತ್ತಮ! ಸುರಧುನಿ, ನಡೆ ಮಗೂ! ಹೊರಟುಹೋಗೋಣ. ಇನ್ನು ಮೇಲೆ ಇಲ್ಲಿ ಜಲಪಾನ ಸಹ ಮಾಡ ಬಾರದು!—ಎನ್ನುತ್ತ ತನ್ನ ಚಿಕ್ಕ ಮಗಳ ಕೈಯನ್ನು ಹಿಡಿದುಕೊಂಡು ದಿಗಂಬರಿಯು ಹೊರಡಲನುವಾದಳು.

ನಾರಾಯಣಿಯು ತರಕಾರಿ ಹೆಚ್ಚುತ್ತಿದ್ದಳು. ಈಳಿಗೆಮಣೆಯನ್ನು ಹಾಗೆಯೇ ಬಿಟ್ಟು ಓಡಿ ಬಂದು, ತಾಯಿಯನ್ನು ಅಡ್ಡಗಟ್ಟಿದಳು.

ದಿಗಂಬರಿಯು ಬಿಕ್ಕಿ ಬಿಕ್ಕಿ ಅಳುತ್ತ "ನಾರಾಯಣಿ, ನನ್ನನ್ನು ಖಂಡಿತ ವಾಗಿ ತಡೆಯಬೇಡ! ಹೋಗಗೊಡು! ಇಲ್ಲಿಯ ಅನ್ನವನ್ನು ಊಟಮಾಡಿ ಕೊಂಡು ಜೀವಿಸಿರುವುದಕ್ಕಿಂತ, ಮರದ ಕೆಳಗೆ ಉಪವಾಸವಿದ್ದು ಸತ್ತರೂ ಎಷ್ಟೋ ಲೇಸು!" ಎಂದಳು.

"ಯಾರ ಮೇಲೆ ಕೋಪ ಮಾಡಿಕೊಂಡು ಹೋಗುವೆ, ಅಮ್ಮಾ? ನಮ್ಮಿಂದ ಏನಾದರೂ ಅಪರಾಧವಾಗಿದ್ದರೆ ಹೇಳು."

ದಿಗಂಬರಿಯ ರೋದನವು ಮತ್ತಷ್ಟು ಜೋರಾಯಿತು. "ನಾನಿನ್ನೂ ಏನೂ ಅರಿಯದ ಪುಟ್ಟ ಹುಡುಗಿಯಲ್ಲ, ನಾರಾಯಣಿ! ನನಗೆಲ್ಲಾ ಗೊತ್ತಾಗು ವುದು! ನಿನ್ನ ಉತ್ತೇಜನೆಯಿಲ್ಲದೆ ಅವನು ಇಷ್ಟು ಉದ್ಧಟತನದ ಮಾತುಗಳ ನ್ನಾಡುವುದೆಂದರೇನು?—ನಾನು ಪಿಶಾಚಿ, ನನ್ನನ್ನು ಕಳುಹಿಸಿಬಿಡು!—

ಅಷ್ಟೇಕೆ, ನಾನೇ ಹೊರಟುಹೋಗುವೆನು. ನಾನಿರುವುದು ನಿನಗೆ ಕಂಟಕ ಪ್ರಾಯವಾಗಿದೆ. ನನ್ನನ್ನು ಅಡ್ಡಗಟ್ಟಬೇಡ—ಸ್ಥಳ ಬಿಡು!" ಎಂದಳು

ನಾರಾಯಣಿಯು ಮಾತೆಯ ಎರಡೂ ಪಾದಗಳನ್ನು ಮುಟ್ಟಿ ಹೇಳಿದಳು: ಅಮ್ಮಾ! ಈವೊತ್ತು ಒಂದು ದಿನ ಕ್ಷಮಿಸಿಬಿಡು. ಅವರು ಮನೆಗೆ ಬಂದುಬಿಡಲಿ, ನಂತರ ನಿನ್ನ ಇಷ್ಟ ಬಂದಂತೆ ಮಾಡು ಎನ್ನುತ್ತ ಮಾತೆಯ ಕೈ ಹಿಡಿದು ಒಳಗೆ ಕರೆದುಕೊಂಡು ಹೋದಳು. ನಂತರ ಕಾಲುಗಳನ್ನು ತೊಳೆದು, ತನ್ನ ಸೆರಗಿನಿಂದ ಒರೆಸಿ, ಪೀಠದ ಮೇಲೆ ಕುಳ್ಳಿರಿಸಿ, ಬೀಸಣಿಗೆ, ಯಿಂದ ಗಾಳಿ ಹಾಕತೊಡಗಿದಳು.

ತತ್ಕಾಲಕ್ಕೆ ದಿಗಂಬರಿಯ ಕ್ರೋಧವು ಶಾಂತವಾಯಿತು ಆದರೆ ಮಧ್ಯಾಹ್ನ ಶಾಮಲಾಲನು ಊಟಕ್ಕೆ ಕುಳಿತಾಗ ಅವಳು ಬಾಗಿಲಹಿಂದೆ ಕುಳಿತು, ಬಿಕ್ಕಿ ಬಿಕ್ಕಿ ಅಳಲಾರಂಭಿಸಿದಳು. ಸ್ವಲ್ಪ ಹೊತ್ತಿನವರೆಗೆ ಶಾಮ ಲಾಲನು ಸುಮ್ಮನೆ ನೋಡುತ್ತಿದ್ದ. ವಿಷಯವೇನೆಂಬುದೇ ಅವನಿಗೆ ಅರ್ಥ ವಾಗಲಿಲ್ಲ ಸ್ವಲ್ಪ ಸಮಯದ ನಂತರ, ಸಂಗತಿಯೆಲ್ಲ ಅವನಿಗೆ ತಿಳಿಯಿತು. ಹೊಟ್ಟೆಯು ತುಂಬ ಊಟ ಸಹ ಮಾಡದೆ ಎದ್ದುಬಿಟ್ಟ.

ಈ ಕೋಪವು ಯಾರ ಮೇಲೆಂಬುದನ್ನು ನಾರಾಯಣಿ ತಿಳಿದು ಕೊಂಡಳು. ದಾಸಿಗೆ ಇದೆಲ್ಲವನ್ನೂ ಸಹಿಸಲಾಗಲಿಲ್ಲ. ಆ ಮನೆಯಲ್ಲಿ ನಿರ್ದಾಕ್ಷಿಣ್ಯವಾಗಿ ಹಾಗೂ ಇದ್ದ ವಿಷಯ ಇದ್ದಂತೆ ಮಾತನಾಡುತ್ತಿದ್ದವ ಳೆಂದರೆ ಅವಳೊಬ್ಬಳೇ! ಅವಳು ಚಟ್ಟನೆಂದಳು: ಅಜ್ಜಿಯವರು ಬೇಕೆಂತಲೇ ಬಾಬುಗಳನ್ನು ಊಟಮಾಡಗೊಡಲಿಲ್ಲ! ಇನ್ನೆರಡು ನಿಮಿಷಗಳ ನಂತರ ಕಣ್ಣೀರನ್ನು ಹೊರಗೆಡಹಿದ್ದರೆ ಆಗುತ್ತಿರಲಿಲ್ಲವೇ? ಅಷ್ಟರಲ್ಲೇನೂ ಬತ್ತಿ ಹೋಗುತ್ತಿರಲಿಲ್ಲ!

ದಿಗಂಬರಿಯ ಮುಖಕ್ಕೆ ಮಸಿ ಹಚ್ಚಿದಂತಾಯಿತು. ಅವಳೇನೂ ಮಾತನಾಡಲಿಲ್ಲ. ಗುಮ್ಮನಂತೆ ಸುಮ್ಮನೆ ಕುಳಿತಿದ್ದಳು.

ದಿನವೆಲ್ಲಾ ಅಲ್ಲಿ ಇಲ್ಲಿ ಅಲೆದು, ಮಧ್ಯಾಹ್ನಕ್ಕೆ ರಾಮ ಮನೆಗೆ ಬಂದ. ಅತ್ತಿತ್ತ ಇಣಿಕಿ ನೋಡಿ, ಅತ್ತಿಗೆಯ ಕೊಠಡಿಯನ್ನು ಪ್ರವೇಶಿಸಿ ನೋಡಲಾಗಿ ಅವಳು ಗೋವಿಂದನನ್ನು ಹತ್ತಿರ ಮಲಗಿಸಿಕೊಂಡು ಮಲಗಿದ್ದಳು. ನಿತ್ಯದ

ಪರಿಸ್ಥಿತಿಯಲ್ಲಿ ಏನೋ ಬದಲಾವಣೆ ಇದೆಯೆಂದು ಅವನಿಗೆ ತಿಳಿಯಿತು. ಆದರೂ, ಅವನು ಹೆದರುತ್ತ ಮೆಲುದನಿಯಿಂದ "ಹಸಿವಾಗುತ್ತದೆ" ಎಂದ.

ಅತ್ತಿಗೆ ಏನೂ ಉತ್ತರಕೊಡಲಿಲ್ಲ.

ತುಸು ಜೋರಾದ ಧ್ವನಿಯಿಂದ ಅವನು ಪುನಃ ಕೇಳಿದ: ಏನು ತಿನ್ನಲಿ?

ನಾರಾಯಣಿಯು ಮಲಗಿದ್ದಂತೆಯೇ ಉತ್ತರವಿತ್ತಳು: ನನಗೆ ಗೊತ್ತಿಲ್ಲ; ಇಲ್ಲಿಂದ ಹೋಗು!

"ಇಲ್ಲ, ನಾನು ಹೋಗುವುದಿಲ್ಲ! ನನಗೇನು ಹಸಿವೆಯಾಗುವುದಿಲ್ಲವೇ?"

ನಾರಾಯಣಿಯು ಮತ್ತೊಂದು ಪಕ್ಕಕ್ಕೆ ಹೊರಳುತ್ತ ದುಃಖಿತ ಸ್ವರದಿಂದ ಹೇಳಿದಳು: ನನ್ನನ್ನು ಬೇಜಾರುಪಡಿಸಬೇಡ, ಹೋಗು! ನಿತ್ತೋ ಇರುವಳು, ಅವಳನ್ನು ಕೇಳು.

ರಾಮು ಮತ್ತೇನೂ ಹೇಳದೆ ಅಲ್ಲಿಂದ ದಾಸಿಯನ್ನು ಹುಡುಕುತ್ತ ಹೊರಗೆ ಬಂದ. ಅವಳನ್ನು ಕಾಣುತ್ತಲೇ ಹೇಳಿದ: ನಿತ್ತೋ! ಏನಾದರೂ ತಿಂಡಿ ಕೊಡು!

ದಾಸಿಯು ಪ್ರಾಯಶಃ ಸಿದ್ಧಳಾಗಿಯೇ ಇದ್ದಳು. ಒಡನೆಯೇ ಸ್ವಲ್ಪ ಪುರಿ, ಸಕ್ಕರೆ ಪೂರಿ ಮತ್ತು ಒಂದು ಲೋಟ ಹಾಲನ್ನು ತೆಗೆದುಕೊಂಡು ಬಂದಳು.

ರಾಮುನಿಗೆ ಸಿಟ್ಟು ಬಂತು. "ಇಷ್ಟೇನೇ?" ಎಂದ ಕೋಪದಿಂದ.

"ಚಿಕ್ಕ ಬಾಬೂ! ಗಲಾಟೆ ಮಾಡದೆ ಸುಮ್ಮನೆ ಕೊಟ್ಟದ್ದನ್ನು ತಿಂದು ಹೋಗ! ದೊಡ್ಡ ಬಾಬುಗಳು ಊಟ ಸಹ ಮಾಡದೆ ಕಚೇರಿಗೆ ಹೊರಟು ಹೋದರು. ಇಲ್ಲಿ ಬಹೂಜೀ ಉಪವಾಸ ಮಲಗಿರುವರು. ನಿಮ್ಮ ಗಲಾಟೆಯನ್ನು ಕೇಳಿ ಅವರೇನಾದರೂ ಎದ್ದು ಬಂದರೆ, ನಿಜವಾಗಿಯೂ ನಿಮಗೆ ಕೇಡು—ತಿಳಿಯಿತೇ!"

ರಾಮು ಎಲ್ಲವನ್ನೂ ಕಣ್ಣಾರೆ ನೋಡಿಯೇ ಬಂದಿದ್ದ. ಆದ್ದರಿಂದ, ಗಲಾಟೆ ಮಾಡದೆ ಹಾಲನ್ನು ಕುಡಿದು, ಸಕ್ಕರೆ ಪೂರಿ ಮತ್ತು ಪುರಿಯನ್ನು ಜೇಬಿನಲ್ಲಿ ಹಾಕಿಕೊಂಡು, ಕೆರೆ-ಕಟ್ಟೆಯ ಬಳಿ ಹೋಗಿ ಮರದ ಕೆಳಗೆ ಕುಳಿತುಕೊಂಡ. ತಿನ್ನುವುದಕ್ಕೆ ಅವನಿಗೆ ಇಷ್ಟವಾಗಲಿಲ್ಲ. ಅತ್ತಿಗೆ ಉಪವಾಡ

ಮಲಗಿರುವಳು— ಎಂಬ ಯೋಚನೆಯು ಅವನಿಗೆ ಬಾರಿ ಬಾರಿಗೂ ಉಂಟಾ ಗುತ್ತಿತ್ತು. ಅನ್ಯಮನಸ್ಕನಾಗಿ ಪುರಿಯನ್ನು ಅಗಿಯುತ್ತ ಅವನು ಯೋಚಿಸತೊಡಗಿದ. ಪೂರ್ವಕಾಲದ ಋಷಿ-ಮುನಿಗಳಂತೆ ಅವನಿಗೇನಾದರೂ ಮಂತ್ರ ಬಂದಿದ್ದರೆ, ಅವನು ಕುಳಿತಲ್ಲಿಂದಲೇ ಅತ್ತಿಗೆಯ ಹೊಟ್ಟೆತುಂಬು ವಂತೆ ಮಾಡುತ್ತಿದ್ದ! ಆದರೆ ಅಂತಹ ಮಂತ್ರವಾವುದೂ ಅವನಿಗೆ ಗೊತ್ತಿಲ್ಲ— ಮಾಡುವುದೇನು ? ಮನೆಗೆ ಹೋಗಿ, ಅತ್ತಿಗೆಯನ್ನು ಒತ್ತಾಯಪಡಿಸಿ ಊಟಕ್ಕೆ ಎಬ್ಬಿಸಲೇ—ಎಂದು ಯೋಚಿಸುವನು. ಆದಕ್ಕೂ ನಾಚಿಕೆ. ಅದೂ ಅಲ್ಲದೆ ಅಣ್ಣನು ಊಟ ಮಾಡಿಲ್ಲವೆಂದಬಳಿಕ ಅತ್ತಿಗೆ ಊಟ ಮಾಡುವ ಳಾದರೂ ಹೇಗೆ ? ಒತ್ತಾಯಪಡಿಸಿದರೂ ಪ್ರಯೋಜನವಿಲ್ಲ!—ಹೀಗೆಲ್ಲ ಯೋಚಿಸಿ, ಅವನು ಪುರಿ ಮತ್ತು ಸಕ್ಕರೆ ಪೂರಿಯನ್ನು ಕೆರೆಯಲ್ಲಿ ಬಿಸುಟ, ಅಲ್ಲೇ ಸುಮ್ಮನೆ ಓಡಾಡತೊಡಗಿದನು. ಬಾರಿ ಬಾರಿಗೂ ಅವನ ಮನಸಿಗೆ ಅದೇ ಯೋಚನೆ ಬರತೊಡಗಿತು— 'ಅತ್ತಿಗೆ ಉಪವಾಸವಿದ್ದಾಳೆ!' ಈ ವಿಷಯ ಅವನು ಹೆಚ್ಚಿಗೆ ಯೋಚಿಸದಷ್ಟೂ, ಅವನ ಹೃದಯವನ್ನು ಸೂಜಿ ಗಳಿಂದ ಚುಚ್ಚಿದಂತಾಗುತ್ತಿತ್ತು.

ರಾತ್ರಿ ಶಾಮಲಾಲನು ಪತ್ನಿಯನ್ನು ಕುರಿತು ಹೇಳಿದನು : ಇನ್ನು ಸಹಿಸಲಾರೆ! ಈ ಪೋರನ ಸಂಗಡ ಇರುವುದು ನನಗೆ ಬಹಳ ಕಷ್ಟವಾಗಿದೆ.

ನಾರಾಯಣಿಯು ಚಕಿತಳಾಗಿ ಕೇಳಿದಳು : ಯಾರ ವಿಷಯವಾಗಿ ಹೇಳುತ್ತಿರುವಿರಿ ?

"ರಾಮನ ವಿಷಯ! ನಿಮ್ಮ ತಾಯಿಯು ನನ್ನ ಸಂಗಡ ನಾಲ್ಕೈದು ದಿನಗಳಿಂದಲೂ ಒಂದೇ ಸಮನೆ ಹೇಳುತ್ತಿರುವರು—ಅವನು ಅವರನ್ನು ಬಹಳ ಅಪಮಾನಗೊಳಿಸುತ್ತಿರುವನಂತೆ! ನಾನು ನಾಳೆಯೇ ಪಂಚಾಯತ ರನ್ನು ಕರೆಸಿ ಮನೆ-ಆಸ್ತಿ ಎಲ್ಲವನ್ನೂ ವಿಭಾಗ ಮಾಡಿಸಿ, ಅವನನ್ನು ಬೇರೆ ಇರಿಸಿಬಿಡುವೆನು. ಇನ್ನು ನನ್ನಿಂದ ಸಹಿಸಲಾಗುವುದಿಲ್ಲ."

ನಾರಾಯಣಿಯು ಆಶ್ಚರ್ಯದಿಂದ ಸ್ತಬ್ಧಳಾದಳು. ಸ್ವಲ್ಪ ಸಮಯ ಸುಮ್ಮನಿದ್ದು, ನಂತರ ಹೇಳಿದಳು : ರಾಮನನ್ನು ಬೇರೆ ಇರಿಸುವಿರಾ! ಈ ಮಾತನ್ನು ಬಾಯಿಂದ ಸಹ ಹೇಳಬೇಡಿ! ಅವನಿನ್ನೂ ಏನೂ ಅರಿಯದ ಹುಡುಗ; ಆಸ್ತಿ-ಜಮೀನುಗಳನ್ನು ತೆಗೆದುಕೊಂಡು ಏನು ಮಾಡುವನು ಹೇಳಿರಿ ?

ಶಾಮಲಾಲನು ವ್ಯಂಗ ಸ್ವರದಿಂದ ಉತ್ತರವಿತ್ತನು : ಪಾಪ, ಇನ್ನೂ ಹಾಲು-ಕುಡಿಯುವ ಮಗುವಲ್ಲವೇ ? ಹಣ-ಕಾಸು ಜಮೀನನ್ನು ತೆಗೆದು ಕೊಂಡು ಏನು ಮಾಡುವನೋ, ಅವನೇ ಬಲ್ಲ !

"ಅವನಿಗೇನೂ ಗೊತ್ತಿಲ್ಲವೆಂಬುದನ್ನು ನಾನು ಬಲ್ಲೆ! ಈಗ ತಿಳಿಯಿತು, ನಾಲ್ಕೈದು ದಿನಗಳಿಂದಲೂ ಅಮ್ಮ ಇದೇ ವಿಷಯ ನಿಮ್ಮ ಸಂಗಡ ಹೇಳುತ್ತ ತಿರುಗುತ್ತಿರುವರೆಂದು !"

ಶಾಮಲಾಲನು ಅಪ್ರತಿಭನಾಗಿ, ನಾಲ್ಕೂ ಕಡೆ ನೋಡತೊಡಗಿದ. ತುಸು ಹೊತ್ತಿನ ಬಳಿಕ ಹೇಳಿದ : ಇಲ್ಲ; ಅವರೇನೂ ಹೇಳಲಿಲ್ಲ! ನನಗೇನ್ನು ಕಣ್ಣುಗಳಿಲ್ಲವೇ ? ನನ್ನನ್ನು ಶುದ್ಧ ಮಂಕನೆಂದು ತಿಳಿದಿರುವೆಯಾ ?

"ಇಲ್ಲ; ನಾನು ಹಾಗೇನೂ ತಿಳಿದಿಲ್ಲ ಆದರೆ,—ಅವನನ್ನು ಬೇರೆ ಮಾಡಿಬಿಟ್ಟರೆ ಅವನ ಜೊತೆಗಾದರೂ ಯಾರಿರುವರು? ತಾಯಿಯಿಲ್ಲ-ಚಿಕ್ಕಮ್ಮ ನಿಲ್ಲ; ಅಕ್ಕನಿಲ್ಲ-ತಂಗಿಯಿಲ್ಲ! ಅವನಿಗೆ ಅಡಿಗೆ ಮಾಡಿ ಉಣಿಸುವವರಾರು?"

ಶಾಮಲಾಲನು ಸಿಡುಕಿ ಹೇಳಿದ : ಅದೆಲ್ಲಾ ನನಗೆ ಗೊತ್ತಿಲ್ಲ !

ಬಾಯಿಮಾತಿನಿಂದ ನನಗೇನೂ ಗೊತ್ತಿಲ್ಲವೆಂದು ಹೇಳಿದರೂ ಶಾಮ ಲಾಲನಿಗೆ ಎಲ್ಲವೂ ಗೊತ್ತಿತ್ತು. ನಾರಾಯಣಿಯು ಏನನ್ನೋ ಹೇಳಬೇಕೆಂದಿ ದ್ದಳು. ಅಷ್ಟರಲ್ಲೇ ಅವಳ ಕಂಠ ಬಿಗಿದುಬಂತು. ಆದ್ದರಿಂದ ಸ್ವಲ್ಪ ಹೊತ್ತು ಸುಧಾರಿಸಿಕೊಂಡು, ನಂತರ ದುಃಖಿತ ಧ್ವನಿಯಿಂದ ಹೇಳಿದಳು: ಇವೋ ನೋಡಿರಿ! ನಾನಿನ್ನೂ ಹದಿಮೂರು ವರ್ಷದ ಹುಡುಗಿಯಾಗಿ ದ್ದಾಗಲೇ--ಹುಡುಗಿಯರು ಇನ್ನೂ ಗೊಂಬೆಗಳನ್ನಿಟ್ಟುಕೊಂಡು ಆಡುವ ವಯಸ್ಸಿನಲ್ಲಿದ್ದಾಗಲೇ—ನಿಮ್ಮ ಮಾತೆಯವರು ಇಷ್ಟು ದೊಡ್ಡ ಸಂಸಾರದ ಜವಾಬ್ದಾರಿಯನ್ನೆಲ್ಲ ನನಗೆ ವಹಿಸಿ ಸ್ವರ್ಗವನ್ನೈದಿದ್ದರು. ಅವರಿತ್ತ ಜವಾಬ್ದಾರಿಯ ಹೊರೆಯನ್ನು ನಾನು ಹೊತ್ತಿರುವೆನೇ ಇಲ್ಲವೇ, ಎಲ್ಲರಿಗೂ ಹೊತ್ತು ಹೊತ್ತಿಗೆ ಅಡಿಗೆ ಮಾಡಿ ಉಣಬಡಿಸಿರುವೆನೇ ಇಲ್ಲವೇ, ಮಗುವನ್ನು ಪಾಲಿಸಿ ಪೋಷಿಸಿರುವೆನೇ ಇಲ್ಲವೇ, ಎಂಬೀ ವಿಷಯಗಳನ್ನು ಅವರು ಸ್ವರ್ಗ ದಿಂದಲೇ ನೋಡುತ್ತಿರಬಹುದು! ಇಷ್ಟೆಲ್ಲ ಸಂಸಾರ ವ್ಯವಹಾರವನ್ನು ಈ ನನ್ನ ಇಪ್ಪತ್ತಾರು ವರ್ಷದವರೆಗೆ ಒಬ್ಬಳೇ ನಿರ್ವಹಿಸುತ್ತ ಬಂದಿರುವೆನು. ಈಗ ನೀವೇನಾದರೂ ಈ ಸಂಸಾರ-ವ್ಯವಹಾರದಲ್ಲಿ ಕೈಹಾಕಿದರೆ, ನಾನು

ನಿಜವಾಗಿಯೂ ನದಿಯಲ್ಲಿ ಮುಳುಗಿ ಪ್ರಾಣ ಬಿಡುತ್ತೇನು! ಆಗ ನೀವು ಎರಡನೆಯ ಮದುವೆ ಮಾಡಿಕೊಂಡು, ರಾಮುನನ್ನು ಬೇರೆ ಇರಿಸಿಕೊಳ್ಳಿ! ನಿಮ್ಮ ಮನಬಂದಂತೆ ಮಾಡಿಕೊಳ್ಳಿ! ಆಗ ನಾನು ಏನನ್ನೂ ಹೇಳುವುದೂ ಇಲ್ಲ-ನೋಡುವುದೂ ಇಲ್ಲ! ಆದರೆ ಇದೆಲ್ಲ ನನ್ನ ಕಣ್ಣೆದುರಿಗೆ ಮಾತ್ರ ಬೇಡ!"

ಶಾಮಲಾಲನು ಮನಸಿನೊಳಗೇ ಪತ್ನಿಗೆ ಹೆದರುತ್ತಿದ್ದನು. ಅವನು ಮುಂದೇನೂ ಮಾತನಾಡಲಿಲ್ಲ. ರಾತ್ರಿಗೆ ಮಾತು ಅಲ್ಲಿಗೇ ನಿಂತಿತು. ಮರುದಿನ ನಾರಾಯಣಿಯು ರಾಮುನನ್ನು ಸಮೀಪದಲ್ಲಿ ಕುಳ್ಳಿರಿಸಿಕೊಂಡು, ಅತ್ಯಂತ ಸ್ನೇಹಭಾವದಿಂದ ಅವನ ಬೆನ್ನ ಮೇಲೆ ಕೈಯಾಡಿಸುತ್ತ ಹೇಳಿದಳು: ರಾಮು! ರಾಮು! ನೀನು ಇನ್ನು ಇಲ್ಲಿರಬೇಡ, ಮಗೂ! ಬೇರೆ ಎಲ್ಲಾದರೂ ಹೋಗಿ ಇರು—ಇರಬಲ್ಲೆಯಾ?

ರಾಮನು ಅದೇ ಕ್ಷಣ ಒಪ್ಪಿಗೆಯನ್ನು ಸೂಚಿಸುತ್ತ; ನಕ್ಕು ಹೇಳಿದ: ಓಹೋ; ಇರಬಲ್ಲೆ! ನೀನು, ನಾನು, ಗೋವಿಂದ ಮತ್ತು ಭೋಲ! ಒಳ್ಳೆಯದು, ಯಾವಾಗ ಹೊರಡೋಣ, ಅತ್ತಿಗೆ!

ನಾರಾಯಣಿಗೆ ಏನೂ ಉತ್ತರ ಹೇಳಲು ತೋರಲಿಲ್ಲ. ಅವಳು ಹೇಳುವಳಾದರೂ ಏನು? ಆದರೆ ರಾಮು ಕೇಳುವನೇ? ಅವನು ಅತ್ಯಂತ ಉತ್ಸಾಹದಿಂದ ಪುನಃ ಕೇಳಿದ: ಯಾವಾಗ ಹೊರಡೋಣ, ಅತ್ತಿಗೆ?

ರಾಮುನನ್ನು ಪ್ರೀತಿಯಿಂದ ಬಾಚಿ ತಬ್ಬಿಕೊಂಡು ಅವಳೆಂದಳು: ಹಾಗಿದ್ದರೆ ಅತ್ತಿಗೆಯನ್ನು ಬಿಟ್ಟು, ನೀನು ಬೇರೆ ಎಲ್ಲೂ ಇರಲಾರೆಯಾ?

ರಾಮು ತಲೆಯುಲ್ಲಾಡಿಸುತ್ತ "ಇಲ್ಲ; ಇರಲಾರೆ!" ಎಂದ.

"ಅತ್ತಿಗೆ ಸತ್ತು ಹೋದರೆ, ಆಗೇನು ಮಾಡುವೆ?"

"ಛಿಃ!"

"ಛಿಃ ಇಲ್ಲ; ಏನೂ ಇಲ್ಲ! ಈಗ ನೀನು ಅತ್ತಿಗೆ ಹೇಳಿದ ಮಾತನ್ನು ಕೇಳುವುದಿಲ್ಲ; - ನಂತರ ನೋಡು!"

ರಾಮನು ಪ್ರತಿವಾದಿಸುತ್ತ "ನಾನು-ಯಾವಾಗ ನಿನ್ನ ಮಾತನ್ನು ಕೇಳಿಲ್ಲ?" ಎಂದ.

"ಯಾವಾಗ ಕೇಳಿರುವೆ, ಹೇಳು! ಎಷ್ಟು ದಿನಗಳಿಂದ ಹೇಳುತ್ತಿರುವೆನು, ಅಮ್ಮನ ಅಪಮಾನ ಮಾಡಬೇಡವೆಂದು? ಆದರೂ ಮನಸಿಗೆ ಬಂದಂತೆ ಅವರನ್ನು ಬೈಯುತ್ತಿರುವೆ; ನಿನ್ನೆಯೂ ಅವರ ಅಪಮಾನ ಮಾಡಿದೆ! ಈ ಬಾರಿ ನೋಡು, ನಾನು ಖಂಡಿತವಾಗಿಯೂ ಮನ ಬಂದಲ್ಲಿಗೆ ಹೊರಟುಹೋಗುವೆನು!"

"ನಾನೂ ಸಂಗಡ ಬರುವೆನು!"

"ನಾನು ಎಲ್ಲಿಗೆ ಹೋಗುವೆನೆಂಬುದೇ ನಿನಗೆ ತಿಳಿಯುವುದಿಲ್ಲ. ನಿನಗೆ ಕಾಣದೆ ಹೊರಟುಹೋಗುವೆನು."

"ಮತ್ತೆ ಗೋವಿಂದ........!"

"ಅವನು ನಿನ್ನ ಬಳಿಯಿರುವನು. ನೀನೇ ಅವನನ್ನು ಸಾಕಿ–ಸಲಹು!"

"ಇಲ್ಲ; ನನ್ನಿಂದ ಆಗುವುದಿಲ್ಲ, ಅತ್ತಿಗೆ!"

ನಾರಾಯಣಿಗೆ ನಗೆಯನ್ನು ತಡೆಯಲಾಗಲಿಲ್ಲ. ಅವಳು ನಕ್ಕು ಹೇಳಿದಳು: ಏಕಾಗುವುದಿಲ್ಲ? ನೀನು ಅವನನ್ನು ಸಾಕಿ–ಸಲಹಲೇ ಬೇಕು!

ಈಗ ರಾಮನು ಎಲ್ಲವೂ ಸುಳ್ಳೆಂದು ತಿಳಿದುಕೊಂಡ. ಗೊಳ್ಳನೆ ನಗುತ್ತ "ಎಲ್ಲಾ ಸುಳ್ಳು! ನೀನು ಎಲ್ಲಿಗೂ ಹೋಗುವುದಿಲ್ಲ!" ಎಂದ.

"ಸುಳ್ಳಲ್ಲ, ನಿಜವಾಗಿಯೂ ಹೇಳುತ್ತಿರುವೆನು. ನೋಡುತ್ತಿರು, ನಾನು ಹೊರಟುಹೋಗುವೆನು."

ರಾಮನಿಗೆ ಈಗ ನಿಜವಾಗಿಯೂ ವ್ಯಸನವಾಯಿತು. ಅನುತಪ್ತ ಸ್ವರದಿಂದ ಅವನು ಕೇಳಿದ: ನೀನು ಹೇಳಿದಂತೆ ಕೇಳಿದರೆ?

ನಾರಾಯಣಿಯು ಮುಗುಳುನಗೆ ನಕ್ಕು "ಆಗ ಹೋಗುವುದಿಲ್ಲ. ಮತ್ತು ನಿನಗೂ ಗೋವಿಂದನನ್ನು ಸಾಕುವ ಕೆಲಸವಿರುವುದಿಲ್ಲ." ಎಂದಳು.

ರಾಮನಿಗೆ ಬಹಳ ಸಂತೋಷವಾಯಿತು. "ಹಾಗೆಯೇ ಆಗಲಿ! ಈವೊತ್ತಿನಿಂದ ಮುಂದೆ ಹೇಗಿರುವೆನೆಂದು ನೀನೇ ನೋಡಿಕೋ!" ಎಂದು ಹೊರಕ್ಕೆ ಹೊರಟುಹೋದ.

---



ಎಂಟು ಹತ್ತು ದಿನಗಳು ಬಹಳ ಶಾಂತಿಯಿಂದ ಕಳೆದುವು. ಯಾವ ಉಪದ್ರವವೂ ಇರಲಿಲ್ಲ. ದಿಗಂಬರಿಯು ಏನೂ ವ್ಯಾಜ್ಯ ತೆಗೆಯುತ್ತಿರಲಿಲ್ಲ ವೆಂದಲ್ಲ; ಆದರೆ ರಾಮನು ಕೋಪ ಮಾಡಿಕೊಳ್ಳದೆ ಸುಮ್ಮನಿರುತ್ತಿದ್ದ. ಅತ್ತಿಗೆಯು ಆ ದಿನ ಆಡಿದ ಮಾತುಗಳಲ್ಲಿ ಅವನಿಗೆ ಪೂರ್ಣ ನಂಬಿಕೆ ಯುಂಟಾಗದಿದ್ದರೂ, ಅವನ ಮನಸ್ಸು ಮಾತ್ರ ಹೆದರಿತ್ತು. ಅಂತೂ ಭಗವಂತನ ಲೀಲೆಯೋ ಎಂಬಂತೆ—ಪುನಃ ಒಂದು ದುರ್ಘಟನೆ ನಡೆಯಿತು.

ಇಂದು ದಿಗಂಬರಿಯು ತನ್ನ ಸ್ವರ್ಗೀಯ ಪಿತೃವರ್ಯರ ವಾರ್ಷಿಕ ತಿಥಿಯನ್ನು ಮಾಡುವುದಕ್ಕೋಸ್ಕರ, ಹನ್ನೆರಡು ಬ್ರಾಹ್ಮಣರನ್ನು ಭೋಜನಕ್ಕೆ ಹೇಳಬೇಕೆಂದು ಸಂಕಲ್ಪಿಸಿಕೊಂಡಿದ್ದಳು.

ಬೆಳಗ್ಗೆ ೭-೮ ಗಂಟೆಯ ಸಮಯ. ರಾಮನು ಪಾಟಿಯ ಮೇಲೆ ಗಣಿತ ವನ್ನು ಮಾಡುತ್ತಿದ್ದ. ಅಷ್ಟರಲ್ಲಿ ಭೋಲನು ಬಂದು ಮೆಲ್ಲನೆ ಹೇಳಿದ: ಚಿಕ್ಕ ಬಾಬೂ!....................ನಿಮ್ಮ ಕಾರ್ತಿಕ-ಗಣೇಶಗಳನ್ನು ಹಿಡಿದು ಕೊಂಡು ಹೋಗುವುದಕ್ಕೆ ಬಲೆಯನ್ನು ತಂದಿರುವರು, ಹೋಗಿ ನೋಡಿ!

ಘಟ್ಟದ ಕೆಳಗಿನ ನೀರಿನಲ್ಲಿ ಬಹಳ ಪುರಾತನವಾದ ಎರಡು ದೊಡ್ಡ-ದೊಡ್ಡ ಮೀನುಗಳು ಓಡಾಡುತ್ತಿದ್ದುವು. ಅವುಗಳಿಗೆ ಮನುಷ್ಯರೆಂದರೆ ಹೆದರಿಕೆಯೇ ಇರಲಿಲ್ಲ. ರಾಮನು ಅವುಗಳನ್ನು ತಾನು ಸಾಕಿದ ಮೀನು ಗಳೆಂದು ಹೇಳಿಕೊಳ್ಳುತ್ತಿದ್ದ. ಮತ್ತು ಅವುಗಳಿಗೆ 'ಕಾರ್ತಿಕ-ಗಣೇಶ' ಗಳೆಂದು ನಾಮಕರಣ ಸಹ ಮಾಡಿದ್ದ ಮೊಹಲ್ಲಾದಲ್ಲಿ ರಾಮನ ಬಾಯಿಂದ 'ಕಾರ್ತಿಕ-ಗಣೇಶ'ಗಳ ರೂಪ-ಗುಣ ವರ್ಣನೆಯನ್ನು ಕೇಳದಿದ್ದವರೇ ಇಲ್ಲ. ಅಲ್ಲದೆ, ಅವನ ಬಲಾತ್ಕಾರದಿಂದ ಎಲ್ಲರೂ ಅವುಗಳನ್ನೊಮ್ಮೆ ನೋಡಿ ಸಹ ಬಂದಿದ್ದರು. ಅವುಗಳಲ್ಲಿರುವ ವಿಶೇಷತೆ ಏನೆಂಬುದನ್ನು ಅರಿತಿದ್ದವನು ಅವನೊಬ್ಬನೇ! ಅದರಲ್ಲಿ ಕಾರ್ತಿಕ ಯಾವುದು, ಗಣೇಶ ಯಾವುದು ಎಂದು ಗುರುತಿಸಲು ಅವನಿಂದಲ್ಲದೆ ಮತ್ತಾರಿಂದಲೂ ಆಗುತ್ತಿರಲಿಲ್ಲ. ಅಷ್ಟೇಕೆ? ದಿನವೆಲ್ಲಾ ಇವನ ಸಂಗಡಲೇ ಇರುತ್ತಿದ್ದ ಭೋಲನು ಕೂಡ ಎಷ್ಟೋ ಭಾರಿ ಕಾರ್ತಿಕ ಯಾವುದೋ ಗಣೇಶ ಯಾವುದೋ ಎಂದು ಕಕ್ಕಾಬಿಕ್ಕಿಯಾಗುತ್ತಿದ್ದ; ಅನೇಕ ಸಲ ಈ ತಪ್ಪಿಗಾಗಿ ರಾಮನಿಂದ ಏಟು ಸಹ ತಿಂದಿದ್ದ.

ನಾರಾಯಣಿಯೂ ಎಷ್ಟೋ ಬಾರಿ ತಮಾಷೆಗೆ ನಕ್ಕು ಹೇಳಿದ್ದಳು: "ರಾಮನ 'ಕಾರ್ತಿಕ-ಗಣೇಶ'ಗಳು ನನ್ನ ಹದಿಮೂರನೆಯ ದಿನದ ತಿಥಿಗೆ ಉಪಯೋಗವಾಗುವುವು!" ಎಂದು.

ಭೋಲನ ಮಾತನ್ನು ಕೇಳಿ ರಾಮನು ಕೊಂಚಮಾತ್ರವೂ ವಿಚಲಿತನಾಗಲಿಲ್ಲ. ಅವನು ಪಾಟಿಯ ಮೇಲೆ ಮತ್ತಷ್ಟು ಬಗ್ಗಿ ಹೇಳಿದ: "ಬಲೆಯನ್ನು ಬೀಸಿ ಸ್ವಲ್ಪ ತಮಾಷೆ ನೋಡಲಿ! ಬಲೆಯನ್ನೇ ಕಿತ್ತುಕೊಂಡು ಈಚೆಗೆ ಬಂದುಬಿಡುವುವು"

"ಇಲ್ಲ, ಚಿಕ್ಕ ಬಾಬೂ! ಅದು ನಮ್ಮಲ್ಲಿನ ಬಲೆಯಲ್ಲ. ಮೀನು ಹಿಡಿಯುವವರ ಬಳಿಯಿಂದ ದೊಡ್ಡ ಬಲೆಯನ್ನು ಕೇಳಿ ತಂದಿರುವರು. ಅದರಿಂದ ತಪ್ಪಿಸಿಕೊಳ್ಳಲು ಸಾಧ್ಯವಿಲ್ಲ!" ಎಂದ ಭೋಲ. ರಾಮನು ಪಾಟಿಯನ್ನು ಕೆಳಗಿಟ್ಟು "ನಡೆ, ಹಾಗಿದ್ದರೆ ಹೋಗಿ ನೋಡೋಣ!" ಎಂದು ಕೆರೆಯ ಬಳಿಗೆ ಹೋದ. ನೋಡಲಾಗಿ ನಿಜವಾಗಿಯೂ ಇವನ 'ಕಾರ್ತಿಕ-ಗಣೇಶ' ಗಳನ್ನು ಹಿಡಿಯಲು ಪ್ರಯತ್ನಗಳು ನಡೆಯುತ್ತಿದ್ದುವು. ಭಾಗನು ಘಟ್ಟದ ಬಳಿ ಸ್ವಲ್ಪ ಪುರಿಯನ್ನು ಚೆಲ್ಲಿ, ಬಲೆಯನ್ನು ಹಿಡಿದು ನಿಂತಿದ್ದನು.

ರಾಮನು ಅವನಿಗೆ ಬಲವಾಗಿ ಒಂದೇಟನ್ನು ಕೊಟ್ಟು "ನೀಚ! ಪುರಿಯನ್ನು ಚೆಲ್ಲಿ, ನನ್ನ ಮೀನುಗಳನ್ನು ಹಿಡಿಯಲು ನೋಡುತ್ತಿರುವೆಯಾ?" ಎಂದು ಗದರಿದ.

ಭಾಗನು ಅಳುಮೋರೆ ಮಾಡಿಕೊಂಡು, ಹೆದರುತ್ತ ಹೆದರುತ್ತ ಹೇಳಿದ: ದೊಡ್ಡ ಬಾಬುಗಳು ಆಜ್ಞೆಮಾಡಿ ಹೋಗಿರುವರು. ಈವೊತ್ತು ಬೇರೆ ಯಾವುದೂ ಮೀನು ದೊರಕಲಿಲ್ಲ!

ರಾಮನು ಮತ್ತೊಂದೇಟು ಕೊಟ್ಟು ಭಾಗನನ್ನು ಅಲ್ಲಿಂದ ತಳ್ಳಿದ; ಅವನ ಕೈಯಲ್ಲಿದ್ದ ಬಲೆಯನ್ನು ಕಿತ್ತೆಸೆದು ಹೇಳಿದ: "ನಡೆ! ಇಲ್ಲಿ ನಿಲ್ಲಬೇಡ; ಕಾಲಿಗೆ ಬುದ್ಧಿ ಹೇಳು!"

ಭಾಗನು ಬಲೆಯನ್ನು ಎತ್ತಿಕೊಂಡು ಅಲ್ಲಿಂದ ಹೊರಟು ಹೋದ.

ರಾಮ ಅಲ್ಲಿಂದ ಹಿಂತಿರುಗಿ, ಪುನಃ ಪಾಟೀಗಂಟು ಹಿಡಿದುಕೊಂಡು ಕುಳಿತ. ಅವನು ಯಾರ ಮೇಲೂ ಕೋಪ ಮಾಡಿಕೊಳ್ಳುವುದಿಲ್ಲವೆಂದು ಪ್ರತಿಜ್ಞೆ ಮಾಡಿಕೊಂಡಿದ್ದ.

ದಿಗಂಬರಿಯು ಇಂದು ಸ್ನಾನ-ಪೂಜೆಗಳನ್ನು ಬೇಗ ಮುಗಿಸಿಕೊಳ್ಳು ತ್ತಿದ್ದಳು. ಅಷ್ಟರಲ್ಲಿ ದಾಸಿಯು ಬಂದು ಹೇಳಿದಳು: ಮೀನು ಸಿಕ್ಕಲಿಲ್ಲ ಅಜ್ಜಿಯವರೇ! ಚಿಕ್ಕ ಬಾಬುಗಳು ಭಾಗನನ್ನು ಹೊಡೆದೋಡಿಸಿಬಿಟ್ಟರು!

ಈ ಎರಡು ಮೀನುಗಳ ಮೇಲೆ ದಿಗಂಬರಿಗೆ ಬಹಳ ದಿನಗಳಿಂದಲೂ ಲುಬ್ಧ ದೃಷ್ಟಿಯಿತ್ತು. ಅಂದರೆ ತನಗೋಸ್ಕರವೆಂದು ಹೇಳಲಾಗುವುದಿಲ್ಲ; ತನ್ನ ಕೈಯಿಂದ ಪಕ್ವ ಮಾಡಿ, ಸದ್ಬ್ರಾಹ್ಮಣರ ಎಲೆಯಲ್ಲಿ ಬಡಿಸಿ, ಪುಣ್ಯ ಮತ್ತು ಕೀರ್ತಿಗೆ ಪಾತ್ರಳಾಗಬೇಕೆಂಬ ಆಸೆಯು ಅವಳಲ್ಲಿ ಬಹಳ ದಿನಗಳಿಂದ ಬಲಿತಿತ್ತು. ಆದ್ದರಿಂದಲೇ ಹಿಂದಿನ ದಿನ ಅಳಿಯನ ಅನುಮತಿ ಪಡೆದು— ಅರ್ಥಾತ್ 'ಕಾರ್ತಿಕ-ಗಣೇಶ'ಗಳ ಹೆಸರನ್ನು ಸಹ ಅವನ ಮುಂದೆ ಹೇಳ ಲಿಲ್ಲ—ಮೀನು ಹಿಡಿಯುವುದಕ್ಕೆಂದು ದೊಡ್ಡ ಬಲೆಯನ್ನು ತರಿಸಿಕೊಂಡಿ ದ್ದಳು. ಭಾಗನಿಗೆ ನಾಲ್ಕಾಣೆ ಇನಾಮು ಕೊಡುವೆನೆಂದು ಆಶೆ ತೋರಿಸಿ ಎಲ್ಲ ಕೆಲಸವನ್ನೂ ಅವನಿಂದ ಮಾಡಿಸಿಕೊಂಡಿದ್ದಳು. ಇಂದು ಬೆಳಗ್ಗೆ ಸಹ ಸ್ನಾನ ಮಾಡಲು ಹೋದಾಗ, ಘಟ್ಟದ ದಡದಲ್ಲಿ ಅವೆರಡೂ ಮೀನುಗಳು ಆಟವಾಡುತ್ತಿದ್ದುದನ್ನು ನೋಡಿ, ಮನೆಗೆ ಬಂದು ನಿಶ್ಚಿಂತಳಾಗಿ ತನ್ನ ಸ್ನಾನ ಪೂಜೆಗಳಲ್ಲಿ ತೊಡಗಿದ್ದಳು. ಅಷ್ಟರಲ್ಲಿ ಈ ದುಃಸಂವಾದವನ್ನು ಕೇಳಿ, ಅವಳ ಕೋಪವು ಮಿತಿಮೀರಿತು; ಹಿತಾಹಿತ ಜ್ಞಾನ ಶೂನ್ಯಳಾದಳು. ಕ್ರೋಧದಿಂದ ಹಲ್ಲುಗಳನ್ನು ಕಡಿಯುತ್ತ—ಹಲ್ಲುಗಳನ್ನು ಕಡಿಯುವುದು ಅವಳಿಗೆ ಅಭ್ಯಾಸವಾಗಿ ಹೋಗಿತ್ತು—ಕೂಗಿಕೊಂಡಳು: ನನ್ನ ಕಾರ್ಯದಲ್ಲಿ ಅಡ್ಡಿ ಬಂದ ಆ ಪಾಪಿ, ಶತ್ರು ಯಾರು? ಆ ನೀಚನು ಎಂದು ಸಾಯುವನು? ಅವನು ಸತ್ತ ದಿನವೇ ನನ್ನ ಆತ್ಮವು ಶಾಂತಿ ಹೊಂದುವುದು. ಇಷ್ಟು ಹೊತ್ತಾಯಿತು; ಇದು ವರೆಗೆ ಬಾಯಲ್ಲಿ ಒಂದು ತೊಟ್ಟು ನೀರು ಹಾಕಿಲ್ಲ! ಹೇ ಭಗವಂತ! ನಾನು ನಿಜವಾಗಿಯೂ ಸತ್ಯವಂತಳಾಗಿದ್ದರೆ, ಮೂರನೆಯ ದಿನವೇ..........!

ನಾರಾಯಣಿಯು ಸಮೀಪದಲ್ಲೇ ಕುಳಿತು ತರಕಾರಿ ಹೆಚ್ಚುತ್ತಿದ್ದಳು. ಇದನ್ನು ಕೇಳಿ, ವಿದ್ಯುದ್ವೇಗದಿಂದ ಎದ್ದು ನಿಂತು, "ಅಮ್ಮಾ!" ಎಂದು ಕೂಗಿದಳು.

ಪ್ರಪಂಚದಲ್ಲಿ, ಮಕ್ಕಳ ಬಾಯಿಂದ ಹೊರಟ 'ಅಮ್ಮಾ!' ಎಂಬ

ಮಾತೃ ಸಂಬೋಧನೆಗೆ ಸಮಾನವಾದದು ಯಾವುದೂ ಇಲ್ಲ. ಅಂತೆಯೇ ಇಂದು ನಾರಾಯಣಿಯ ಬಾಯಿಂದ ಹೊರಟ ಈ ಎರಡಕ್ಕರದ ಮಾತೃ ಸಂಬೋಧನೆಯು ದಿಗಂಬರಿಯ ಕಠೋರ ಹೃದಯವನ್ನು ನೀರಾಗಿ ಕರಗಿಸಿತು. ಆದರೆ ನಾರಾಯಣಿಗೆ ಸುಮ್ಮನಿರಲಾಗಲಿಲ್ಲ. ಅವಳ ಎರಡೂ ಕೆನ್ನೆಗಳ ಮೇಲೆ ಅಶ್ರುಧಾರೆಯು ಪ್ರವಹಿಸತೊಡಗಿತು. ತುಸು ಹೊತ್ತಿನ ನಂತರ ಕಣ್ಣುಗಳನ್ನೊರಿಸಿಕೊಂಡು, ರಾಮನು ಓದುತ್ತ ಕುಳಿತಲ್ಲಿಗೆ ಹೋಗಿ ನಿಂತಳು.

“ ನೀನು ಭಾಗನನ್ನು ಹೊಡೆದೋಡಿಸಿದೆಯಾ ? ” ಎಂದಳು ಕಠೋರ ಸ್ವರದಿಂದ.

ರಾಮನು ಬೆಚ್ಚಿಬಿದ್ದ. ಪಾಟಿಯಿಂದ ತಲೆಯೆತ್ತಿ, ಕ್ಷಣಕಾಲ ಅವಳ ಮುಖವನ್ನು ನೋಡಿದ. ಅವಳ ಪ್ರಶ್ನೆಗೆ ಉತ್ತರವನ್ನು ಕೊಡುವ ಯೋಚನೆ ಸಹ ಮಾಡದೆ, ಹಿಂದಿನ ಬಾಗಿಲಿನಿಂದ ಕಾಲಿಗೆ ಬುದ್ಧಿ ಹೇಳಿದ !

ನಾರಾಯಣಿಗೆ ಒಳಗಿನ ವಿಷಯ ಏನೂ ಗೊತ್ತಾಗಲಿಲ್ಲ. ಒಳಕ್ಕೆ ಬಂದು ಅವಳು ಭಾಗನನ್ನು ಕರೆಸಿದಳು. ಭಾಗನು ಬಂದನು. ನಾರಾಯಣಿಯು ತಾನೇ ಅವನಿಗೆ ಮೀನು ಹಿಡಿಯಲು ಆಜ್ಞೆಯಿತ್ತಳು.

ಬಹೂಜೀಯ ಆಜ್ಞೆಯನ್ನು ಶಿರಸಾವಹಿಸಿ ಭಾಗನು ಬಲೆಯನ್ನು ತೆಗೆದುಕೊಂಡು ಹೊರಟ; ತುಸು ಹೊತ್ತಿನಲ್ಲೇ ದೊಡ್ಡದೊಂದು ಭಾರಿಯ ಮೀನನ್ನು ತೆಗೆದುಕೊಂಡು ಬಂದು, ದೊಪ್ಪನೆ ಅಂಗಳದಲ್ಲಿ ಕುಕ್ಕಿದ.

ನಾರಾಯಣಿಯು ಅಡಿಗೆಯ ಮನೆ ಬಾಗಿಲಲ್ಲಿ ಕುಳಿತಿದ್ದಳು. ಮೀನನ್ನು ನೋಡುತ್ತಲೇ ಬೆಚ್ಚಿ, ಸಂಶಯಗೊಂಡು ಕೇಳಿದಳು : ಭಾಗಾ ! ಇದನ್ನು ನಮ್ಮ ಘಟ್ಟದ ಬಳಿಯಿಂದ ಹಿಡಿಯಲಿಲ್ಲವಷ್ಟೆ? ಇದು ನಮ್ಮ ರಾಮನ ಕಾರ್ತಿಕ-ಗಣೇಶಗಳಲ್ಲಿ ಒಂದಲ್ಲ ತಾನೇ ?

ಭಾಗನು ಇಷ್ಟು ಜಾಗ್ರತೆಯಾಗಿ ಇಷ್ಟು ಭಾರಿಯ ಮೀನನ್ನು ಹಿಡಿದು ತಂದೆನಲ್ಲಾ ಎಂಬ ಹೆಮ್ಮೆಯಿಂದ ನುಡಿದ: ಹೌದು, ಬಹೂಜೀ ! ಇದು ಘಟ್ಟದ ಬಳಿಯಲ್ಲಿನದೇ ! ಬಹಳ ಭಾರಿಯದು ಮೀನು !

ಹೀಗೆಂದು ನುಡಿದು, ದಿಗಂಬರಿಯ ಕಡೆಗೆ ಕೈಬೆರಳನ್ನು ತೋರಿಸಿ— “ ಆ ಅಜ್ಜಿಯವರು ಇದನ್ನೇ ಹಿಡಿದು ತರಬೇಕೆಂದು ಹೇಳಿದ್ದರು ! ” ಎಂದ.

ನಾರಾಯಣಿಗೆ ಜೀವವೇ ಹಾರಿ ಹೋದಂತಾಯಿತು; ಅವಳು ನಿಃಸ್ತಬ್ಧಳಾಗಿ ನಿಂತಲ್ಲೇ ನಿಂತುಬಿಟ್ಟಳು. ದಾಸಿಗೆ ರಾಮನ ವಿಷಯದಲ್ಲಿ ಅಷ್ಟೇನೂ ಪ್ರೀತಿ ಇರಲಿಲ್ಲ ಆದರೂ, ಈ ಮೀನನ್ನು ನೋಡಿ ಅವಳಿಗೆ ದಿಗಂಬರಿಯ ಮೇಲೆ ಮಿತಿಮೀರಿದ ಕೋಪವುಂಟಾಯಿತು. ಅವಳೆಂದಳು: ಅಜ್ಜಿಯವರೇ, ಚಿಕ್ಕ ಬಾಬುಗಳ 'ಕಾರ್ತಿಕ-ಗಣೇಶ' ಗಳ ವಿಷಯ ಮೊಹಲ್ಲೆಯ ಜನರೆಲ್ಲರಿಗೂ ಗೊತ್ತು. ಹೀಗಿರುವಲ್ಲಿ ನೀವು ಏತಕ್ಕಾಗಿ ಅದನ್ನು ಹಿಡಿದುತರುವಂತೆ ಹೇಳಿದಿರಿ? ಇನ್ನೂ ಎರಡು ಮೂರು ಕೆರೆಗಳಿದ್ದುವು; ಅವುಗಳಲ್ಲಿ ಮೀನುಗಳೇ ಇರಲಿಲ್ಲವೇ? ಊಟಕ್ಕೆ ಬರುವವರು ಹತ್ತು-ಹನ್ನೆರಡು ಮಂದಿ; ಹೀಗಿರುವಲ್ಲಿ ಈ ಅರ್ಧ-ಮಣದ ಮೀನನ್ನು ತೆಗೆದುಕೊಂಡು ಮಾಡುವಿರಾದರೂ ಏನು? ಇದನ್ನು ಈ ಕ್ಷಣ ಎಲ್ಲಾದರೂ ಮರೆಯಲ್ಲಿಡಿಸಿರಿ! ಇಲ್ಲದಿದ್ದರೆ ಚಿಕ್ಕ ಬಾಬುಗಳು ಬಂದು ಹಾಹಾಕಾರವೆಬ್ಬಿಸಿಬಿಡುವರು!

ದಿಗಂಬರಿಯು ಮುಖವನ್ನು ಗಂಟಿಕ್ಕಿಕೊಂಡು ಹೇಳಿದಳು: ಇಷ್ಟೊಂದು ಛಲ-ಛಂದಗಳನ್ನು ನಾನು ತಿಳಿಯಲಿಲ್ಲ! ಒಂದು ಮೀನನ್ನು ಹಿಡಿದು ತಂದ ಮಾತ್ರಕ್ಕೆ ಮನೆಯವರೆಲ್ಲಾ ಇಷ್ಟು ಹಾಹಾಕಾರವೆಬ್ಬಿಸುತ್ತಿರುವಿರಿ! ಮರೆಯಲ್ಲಿರಿಸಬೇಕಂತೆ—ಬಂದಿರುವಳು ಯಜಮಾನಿ, ಮರೆಸಿಡುವುದಕ್ಕೆ! ಬ್ರಾಹ್ಮಣರು ಏನನ್ನು ಊಟ ಮಾಡಬೇಕು, ನಿನ್ನ ತಲೆ!

ದಾಸಿಯೆಂದಳು: ನಿಮ್ಮ ಬ್ರಾಹ್ಮಣರು ಊಟ ಮಾಡುವುದು ಇನ್ನೂ ಎರಡು-ಎರಡೂವರೆ ಗಂಟೆಗೆ—ಇನ್ನೂ ಬೇಕಾದಷ್ಟು ಹೊತ್ತಿದೆ. ಅಷ್ಟರಲ್ಲಿ ಒಂದಲ್ಲ, ಹತ್ತು ಮೀನುಗಳು ದೊರಕುವುವು ಚಿಕ್ಕ ಬಾಬುಗಳು ಮೊದಲು ಶಾಲೆಗೆ ಹೊರಟುಹೋಗಲಿ, ಇಲ್ಲದಿದ್ದರೆ ಅವರು ಯಾರನ್ನೂ ಸುಮ್ಮನೆ ಬಿಡುವುದಿಲ್ಲ. ಭೋಲನು ಇಲ್ಲಿಯೇ ನಿಂತಿದ್ದ; ಎಲ್ಲಿಗೆ ಹೊರಟುಹೋದ? ಚಿಕ್ಕ ಬಾಬುಗಳಿಗೆ ಸುದ್ದಿ ತಿಳಿಸಲು ಹೊರಟುಹೋಗಿರಬಹುದು! ಇನ್ನು ಯಾರಿಗೂ ಉಳಿಗಾಲವಿಲ್ಲ;—ಬಹೂಜೀ! ಇನ್ನು ಸುಮ್ಮನೆ ನಿಂತಿರಬೇಡಿ; ಮಾಡಬೇಕಾದ ಕೆಲಸವನ್ನು ಬೇಗನೆ ಮಾಡಿ ಮುಗಿಸಿರಿ!

ಭಾಗನು ನಾಲ್ಕಾಣೆಯ ಇನಾಮಿನ ಆಸೆಗೋಸ್ಕರ ಬಲೆಯನ್ನು ಕೇಳಿ ತಂದಿದ್ದ. ಸದ್ಯದ ಪರಿಸ್ಥಿತಿಯನ್ನು ನೋಡಿ, ಇನಾಮಿನ ಆಶೆಯನ್ನು ತೊರೆದು, ಮೆಲ್ಲನೆ ಅಲ್ಲಿಂದ ಜಾರಿದ.

ಸಮಯ-ಸಂದರ್ಭಗಳೆಂದರೆ ರಾಮನನ್ನು ಎಲ್ಲಿ ಕಾಣಬಹುದು— ಎಂಬ ವಿಷಯವನ್ನು ಭೋಲನು ತಿಳಿದುಕೊಂಡಿದ್ದ. ಅವನು ಓಡುತ್ತ ಓಡುತ್ತ ತೋಟದ ಹಿಂದುಗಡೆ ಉತ್ತರದಿಕ್ಕಿಗಿದ್ದ ಸೀಬೆಯ ಮರದ ಬಳಿಗೆ ಬಂದ. ರಾಮನು ಒಂದು ಕೊಂಬೆಯ ಮೇಲೆ ಕಾಲುಗಳನ್ನು ಇಳಿಬಿಟ್ಟು-ಕೊಂಡು ಕುಳಿತು, ಸೀಬೆಯ ಕಾಯನ್ನು ಅಗಿಯುತ್ತಿದ್ದ. ಭೋಲನು ಮೇಲುಸಿರು ಬಿಡುತ್ತ "ಬೇಗ ಬಂದು ನೋಡಿ, ಚಿಕ್ಕಬಾಬೂ! ಭಾಗನು ನಿಮ್ಮ 'ಕಾರ್ತಿಕ'ವನ್ನು ಕೊಂದು ತಂದಿರುವನು!" ಎಂದನು.

ರಾಮನು ಸೀಬೆಕಾಯಿ ಕಚ್ಚುವುದನ್ನು ಬಿಟ್ಟು, "ಸುಳ್ಳು!" ಎಂದ.

"ನಿಜವಾಗಿಯೂ! ಅಜ್ಜಿಯವರು ಅಜ್ಞೆ ಮಾಡಿದ್ದರಂತೆ! ಇದು ವರೆಗೂ ಅಂಗಳದಲ್ಲೇ ಬಿದ್ದಿದೆ, ಬೇಗ ಬಂದು ನೋಡಿ!"

ರಾಮನು ಮರದಿಂದ ಧಡಮ್ಮನೆ ಧುಮುಕಿದ; ಬಿರುಗಾಳಿಯಂತೆ ಹಾರಿ ಅಂಗಳವನ್ನು ಸೇರಿದ. ವಿೂನನ್ನು ನೋಡುತ್ತಲೇ ಅವನಿಗೆ ಹೇಳಲಾಗದ ದುಃಖ-ತಾಪಗಳುಂಟಾದುವು ಜೋರಾಗಿ ಕೂಗಿಕೊಂಡ: "ಇದೇ ನನ್ನ ಗಣೇಶ! ಅತ್ತಿಗೆ, ನೀನು ಇದನ್ನು ಹಿಡಿದು ತರುವಂತೆ ಹೇಳಿದೆಯಾ?" ಎನ್ನುತ್ತ ನೆಲದ ಮೇಲೆ ಬಿದ್ದು, ಬಲಿಗೇರಿಸಲು ಸಿದ್ಧವಾಗಿರುವ ಕುರಿಯಂತೆ —ಕಾಲುಗಳನ್ನು ಪಟಪಟನೆ ಬಡಿಯುತ್ತ ಹೊರಳಾಡತೊಡಗಿದ.

ಅವನ ಈ ಶೋಕವು ನಿಜವಾಗಿಯೂ ಎಷ್ಟು ಸತ್ಯವಾದುದು ಹಾಗೂ ದುರ್ದಮವಾದುದೆಂಬ ವಿಷಯದಲ್ಲಿ ಬಹುಶಃ ದಿಗಂಬರಿಗೂ ಅನುಮಾನ ಉಳಿಯಲಿಲ್ಲವೆಂದು ಹೇಳಬಹುದು!

ರಾತ್ರಿ ರಾಮನಿಗೆ ಊಟ ಮಾಡಿಸಬೇಕೆಂದು ನಾರಾಯಣಿಯು ಎಷ್ಟೋ ಪ್ರಯತ್ನ ಪಟ್ಟಳು. ಆದರೆ ರಾಮನು ಯಾವುದಕ್ಕೂ ಜಗ್ಗಲಿಲ್ಲ. ಕೈ ಹಿಡಿದು ಎಬ್ಬಿಸಿದಳು; ಕೈಯನ್ನು ಕೊಡಹಿ ದೂರ ಸರಿದ. ಅಂತೂ ದಿನವೆಲ್ಲಾ ಉಪವಾಸವಿದ್ದು, ರಾತ್ರಿ ಒಂದೆರಡು ತುತ್ತು ತಿಂದು ಎದ್ದು ಹೋದ.

* * * * *

ದಿಗಂಬರಿಯು ಮರೆಯಲ್ಲಿ ನಿಂತುಕೊಂಡು, ಅಳಿಯನೊಡನೆ ಹೇಳಿದಳು: ನೀವು ಒಂದು ಸಲ ಹೇಳಿ! ಇಲ್ಲವಿದ್ದರೆ ನಾರಾಯಣಿಯು ಊಟವನ್ನೇ ಮಾಡುವುದಿಲ್ಲ. ಈ ದಿನವೆಲ್ಲಾ ಉಪವಾಸ ಮಾಡಿರುವಳು.

"ಉಪವಾಸ ಏಕೆ ಮಾಡಿದಳು ? " ಎಂದು ಕೇಳಿದನು ಶಾಮುಲಾಲ.

ದಿಗಂಬರಿಗೆ ಅಳಲು ಸಾಧ್ಯವಾಗಲಿಲ್ಲ. ಆದ್ದರಿಂದ, ಅವಳು ಕರುಣ-ಕಂಠಸ್ವರದಿಂದ ಹೇಳಿದಳು : ನನ್ನಿಂದಲೇ ತಪ್ಪಾಯಿತಪ್ಪಾ! ಕ್ಷಮಾಪಣೆ ಕೇಳಿಕೊಳ್ಳುತ್ತೇನೆ. ಬ್ರಾಹ್ಮಣರ ಭೋಜನಕ್ಕೋಸ್ಕರ ಒಂದು ಮೀನನ್ನು ಕೆರೆಯಿಂದ ಹಿಡಿಸಿ ತಂದರೆ, ಇಂತಹ ಮಹಾಭಾರತ-ಕಾಂಡವಾಗುವುದೆಂಬು ದನ್ನು ನಾನೇನು ಬಲ್ಲೆ ?

ಶಾಮುಲಾಲನಿಗೆ ವಿಷಯ ಸರಿಯಾಗಿ ಅರ್ಥವಾಗಲಿಲ್ಲ. ಅವನು ದಾಸಿ ಯನ್ನು ಕರೆದು ಕೇಳಿದ: ಏಕೆ, ಏನಾಯಿತು, ನಿತ್ತೋ!

ದಾಸಿಯು ಮುಂದೆ ಬರದೆ, ನಿಂತಲ್ಲಿಂದಲೇ ಹೇಳಿದಳು : ಅದು ಚಿಕ್ಕ ಬಾಬುಗಳ 'ಗಣೇಶ' ನಾಗಿತ್ತು.

ಶಾಮುಲಾಲನು ಬೆಚ್ಚಿ ಕೇಳಿದನು : ಏನು ? ಅದು ರಾಮುನ 'ಕಾರ್ತಿಕ-ಗಣೇಶ' ಗಳಲ್ಲೊಂದಾಗಿತ್ತೇ?

"ಹೌದು !"

ಇನ್ನು ಹೆಚ್ಚಾಗಿ ಕೇಳಬೇಕಾದ ಆವಶ್ಯಕತೆ ಇರಲಿಲ್ಲ ಅವನಿಗೆ ವಿಷಯವೆಲ್ಲ ಮನಸಿಗೆ ತಿಳಿಯಿತು. "ರಾಮುನೂ ಊಟ ಮಾಡಿರಲಾರ!" ಎಂದನು.

"ಇಲ್ಲ; ಅವರೂ ಮಾಡಿಲ್ಲ!"

"ಅಂದ ಬಳಿಕ ಹೇಳಿಯೂ ವ್ಯರ್ಥ! ಅವನು ಊಟ ಮಾಡದಿದ್ದರೆ ಅವಳು ಖಂಡಿತವಾಗಿಯೂ ಊಟ ಮಾಡುವುದಿಲ್ಲ!"

"ಇಷ್ಟೆಲ್ಲ ಮಹಾಭಾರತ-ಕಾಂಡವಾಗುವುದೆಂದು ತಿಳಿದಿದ್ದರೆ, ಬ್ರಾಹ್ಮಣ ರಿಗೆ ಭೋಜನ ಮಾಡಿಸಬೇಕೆಂಬ ಮಾತನ್ನೇ ಮರೆತು ಸುಮ್ಮನಿರುತ್ತಿದ್ದೆ! ಸ್ವತಃ ತಾನೇ, ಮೀನು ಹಿಡಿದು ತನ್ನಿರೆಂದು ಆಜ್ಞಾಪಿಸಿದಳೇಕೆ, ಈಗ ಹೀಗಾಡುತ್ತಿರುವಳೇಕೆ ? ಅವಳೇ ಬಲ್ಲಳು! ನಾನಂತೂ ಏನೂ ಹೇಳದೆ ಸುಮ್ಮನೆ ಇದ್ದೆ; ಆದರೂ ನನ್ನ ಮೇಲೆಯೇ ದೋಷಾರೋಪಣೆ! ಹೀಗೆಲ್ಲ ಆದರೆ ನಾನು ಒಂದು ಗಳಿಗೆಯೂ ಇಲ್ಲಿರಲಾರೆ. ನಮ್ಮಿಬ್ಬರನ್ನೂ ಬೇರೆ ಎಲ್ಲಿಗಾದರೂ ಕಳುಹಿಸಿ ಬಿಡಿ!

ಸ್ವಲ್ಪ ಸಮಯ ಸುಮ್ಮನಿದ್ದು, ನಂತರ ಅಳುದನಿಯಿಂದ ಪುನಃ ಆರಂಭಿಸಿದಳು: ಇವೆಲ್ಲಾ ನನ್ನ ಹೀನ ಅದೃಷ್ಟ! ಇಲ್ಲದಿದ್ದರೆ ಅಷ್ಟು ದಿಳ್ಳಿ

ಯವನಾದ ಅಣ್ಣನು ಮೃತಿಹೊಂದಿ, ಇಲ್ಲಿ ಎಲ್ಲರ ಕೈಲೂ ಪರಕೆ–ಏಟು ತಿನ್ನಲು ನಾನು ಏಕೆ ಬರಬೇಕಾಗುತ್ತಿತ್ತು ? ಅಪ್ಪಾ ! ನಾವು ನಿರ್ಗತಿಕರು; ನಮಗಾರೂ ದಿಕ್ಕಿಲ್ಲ. ಆದ್ದರಿಂದಲೇ ನಿಮ್ಮನ್ನು ಕೈಜೋಡಿಸಿ ಕೇಳಿಕೊಳ್ಳುವೆನು. ನಮ್ಮ ಜೀವನಕ್ಕೊಂದು ಸ್ಥಳ–ವಸತಿಯನ್ನು ಮಾಡಿ, ಮಾರ್ಗಗಾಣಿಸಿರಿ !

ಶಾಮಲಾಲನು ಚಿಂತಾಗ್ರಸ್ತನಾದನು. ಅವನಿಗೆ 'ಹುಂ' 'ಇಲ್ಲ' ಏನು ಹೇಳಲೂ ತೋಚಲಿಲ್ಲ.

ನಾರಾಯಣಿಯು ಮರೆಯಲ್ಲಿ ನಿಂತು ಎಲ್ಲವನ್ನೂ ಕೇಳುತ್ತಿದ್ದಳು. ಮಾತೆಯ ಈ ನಿರ್ಲಜ್ಜ ವ್ಯವಹಾರದಿಂದ ಅವಳಿಗೆ ಅತ್ಯಂತ ನಾಚಿಕೆಯೆನಿಸಿತು. ಅವಳು ಅಲ್ಲಿ ನಿಲ್ಲದೆ, ನೆಟ್ಟಗೆ ರಾಮನ ಕೊಠಡಿಯ ಬಳಿ ಹೋಗಿ, ಬಾಗಿಲನ್ನು ತಟ್ಟಿ ಹೇಳಿದಳು: ನೀನು ರಾಜ ಹುಡುಗ ! ಅತ್ತಿಗೆಯ ಮಾತನ್ನು ಕೇಳುವುದಿಲ್ಲವೇ ? ಎಲ್ಲಿ, ಬಾಗಿಲು ತೆಗೆ !

ರಾಮನು ಎಚ್ಚರವಾಗಿಯೇ ಇದ್ದ. ಆದರೂ ಉತ್ತರ ಕೊಡಲಿಲ್ಲ.

ನಾರಾಯಣಿಯು ಪುನಃ ಕೂಗಿದಳು—"ಏಳು, ಏಳು ! ಬಾಗಿಲು ತೆಗೆ! ಏಳು!"

ಈ ಬಾರಿ ರಾಮನು ಕೂಗಿ ಹೇಳಿದ: ಇಲ್ಲ; ತೆಗೆಯುವುದಿಲ್ಲ ! ನೀನು ಹೋಗು ! ನೀವೆಲ್ಲರೂ ನನ್ನ ಶತ್ರುಗಳು !

"ಹಾಗೆಯೇ ಸರಿ ! ಹೋಗಲಿ, ಬಾಗಿಲು ತೆಗೆ !"

ಆ ರಾತ್ರಿ ನಿಜವಾಗಿಯೂ ಅವನು ಬಾಗಿಲು ತೆಗೆಯಲೇ ಇಲ್ಲ.

ಶಾಮಲಾಲನು ತನ್ನ ಕೊಠಡಿಯಲ್ಲಿ ಕುಳಿತು ಎಲ್ಲವನ್ನೂ ಕೇಳುತ್ತಿದ್ದನು. ನಾರಾಯಣಿಯು ಒಳಕ್ಕೆ ಬರುತ್ತಲೇ ಹೇಳಿದ: ಯಾವುದಾದರೂ ಒಂದು ಸರಿಯಾದ ವ್ಯವಸ್ಥೆ ಮಾಡಿಕೊಳ್ಳಲೇಬೇಕು. ಇಲ್ಲದಿದ್ದರೆ ನಾನು ಖಂಡಿತವಾಗಿಯೂ ಮನೆ ಬಿಟ್ಟು, ಎಲ್ಲಾದರೂ ವನಬಂದಲ್ಲಿಗೆ ಹೊರಟು ಹೋಗುವೆನು. ಈ ಉಪದ್ರವಗಳನ್ನೆಲ್ಲ ನಾನು ಸಹಿಸಲಾರೆ !

ನಾರಾಯಣಿಯು ಏನೂ ಉತ್ತರ ಕೊಡದೆ ಯೋಚಿಸತೊಡಗಿದಳು.

ಇದಾದ ನಂತರ ಎರಡು ಮೂರು ದಿನಗಳು ಕಳೆದರೂ ರಾಮನ ಕೋಪ ಕಡಿಮೆಯಾಗದಿದ್ದುದನ್ನು ಕಂಡು ನಾರಾಯಣಿಯು ಕ್ಷುಬ್ಧಳಾದಳು.

ಸಾಲದುದಕ್ಕೆ, ಇಂದು ಸಂಜೆಯಾದರೂ ಅವನು ಶಾಲೆಯಿಂದ ಹಿಂತಿರುಗದೆ ಇದ್ದುದನ್ನು ಕಂಡು ಮತ್ತಷ್ಟು ಚಿಂತಾಕ್ರಾಂತಳಾಗಿ, ಅಧೀರಳಾದಳು. ಇಷ್ಟರಲ್ಲಿ ದಿಗಂಬರಿಯು ನದಿಯಿಂದ ಸ್ನಾನಮಾಡಿಕೊಂಡು,— ಊರಿನ ಸಮಾಚಾರವನ್ನೆಲ್ಲ ತಿಳಿದುಕೊಳ್ಳುತ್ತ, ರಾಮನಿಗೆ ಅಮಂಗಳವನ್ನು ಕೋರುತ್ತ, ಅಕ್ಕಪಕ್ಕದವರ ಬಳಿ ತನ್ನ ಹಿರಿಮಗಳ ವಿಚಿತ್ರ ಮತಿ–ಗತಿ ಯಿಂದಾಗುವ ದುಷ್ಪರಿಣಾಮಗಳನ್ನು ಹೇಳಿಕೊಳ್ಳುತ್ತ ಶೋಕತಾಪಾದಿ ಗಳಿಂದ ತನ್ನ ತಲೆಗೂದಲು ಶೀಘ್ರವಾಗಿ ಬೆಳ್ಳಗಾದುದರ ಕಾರಣವನ್ನು ಹೇಳಿಕೊಳ್ಳುತ್ತ, ತನ್ನ ಅಣ್ಣನ ಮನೆಯಲ್ಲಿ ತಾನು ನಡೆಸುತ್ತಿದ್ದ ಏಕಚ್ಛತ್ರ ಪ್ರಭುತ್ವದ ಇತಿಹಾಸವನ್ನು ಬಣ್ಣಿಸುತ್ತ, ವಿರಾಮವಾಗಿ ಮನೆಗೆ ಹಿಂತಿರುಗು ತ್ತಿದ್ದಳು. ಆದರೆ ಅಷ್ಟರಲ್ಲೇ ಒಂದು ಘಟನೆಯನ್ನು ಕೇಳಿ, ಆತುರಾತುರ ಮನೆಯನ್ನು ತಲುಪಿದಳು. ಮನೆಯ ಅಂಗಳವನ್ನು ಸೇರುತ್ತಲೇ ಕೂಗಿ ಹೇಳಿದಳು: ನಿನ್ನ ಗುಣವಂತ, ಮುದ್ದು ಮೈದುನನ ಕೃತ್ಯವನ್ನು ಕೇಳಿ ದೆಯಾ ? ನಾರಾಯಣಿ !

ಹೆದರಿಕೆ, ಸಂಶಯಗಳಿಂದ ನಾರಾಯಣಿಯ ಮುಖ ಪೆಚ್ಚಾಯಿತು. “ಎಂತಹ ಕೃತ್ಯ ? ” ಎಂದು ಕೇಳಿದಳು.

“ಅವನನ್ನು ಪೋಲೀಸ್ ಠಾಣೆಗೆ ಹಿಡಿದುಕೊಂಡು ಹೋಗಿರುವರು. ಇಷ್ಟೊಂದು ಪುಂಡತನ ಮಾಡಿದರೆ ಠಾಣೆಗೆ ಹೋಗವೆ ಮತ್ತೇನು ? ಇಂತಹ ನೀಚ-ಜಾತಿಯ ಹುಡುಗನನ್ನು ನನ್ನ ಜನ್ಮದಲ್ಲೇ ನೋಡಿಲ್ಲ! ಹೋಗಲಿ, ಸೆರೆಮನೆಗೆ ಹೋಗಲಿ! ”

ಅವಳ ಮುಖದಲ್ಲಿ ಸಂತೋಷವು ಉಕ್ಕಿ ಕಾಣುತ್ತಿತ್ತು. ನಾರಾಯ ಣಿಯು ಅವಳ ಮಾತಿಗೇನೂ ಉತ್ತರ ಕೊಡದೆ, ದಾಸಿಯನ್ನು ಕರೆದು ಕೇಳಿ ದಳು: ರಾಮ ಇಷ್ಟು ಹೊತ್ತಾದರೂ ಮನೆಗೆ ಬರಲಿಲ್ಲ. ಭೋಲನನ್ನು ಕಳುಹಿಸು, ಹುಡುಕಿಕೊಂಡು ಬರಲಿ !

ದಿಗಂಬರಿಯು ಹೇಳಿದಳು: ನಾನು ಎಲ್ಲಾ ವಿಷಯ ತಿಳಿದುಕೊಂಡು ಬಂದಿರುವೆನು.

ನೃತ್ಯಕಾಳಿಯು “ಅಂ” ಎನ್ನುತ್ತ ಸುಮ್ಮನೆ ನಿಂತುಕೊಂಡಳು. ನಾರಾಯಣಿಯು ಗದರಿಸಿ “ನಿಂತಿರುವೆ ಏಕೆ ? ಹೇಳಿದ್ದು ಕೇಳಿಸಲಿಲ್ಲವೇ ? ಹೋಗು ಈ ಕ್ಷಣ ! ” ಎಂದಳು.

ದಾಸಿಯು ಗಾಬರಿಗೊಂಡು, ಆ ಕ್ಷಣವೇ ಅಲ್ಲಿಂದ ಹೊರಟಳು. ದಿಗಂಬರಿಯು ಉದ್ವೇಗದಿಂದ ಮಗಳನ್ನು ಕೇಳಿದಳು: ಏನಾಯಿತೆಂಬುದನ್ನು ಕೇಳುವುದಿಲ್ಲವೇ ? ನಾರಾಯಣಿ !

"ಮೊದಲು ನೀನು ಹೋಗಿ ಸೀರೆಯುಟ್ಟುಕೋ, ಅಮ್ಮ ! ನಂತರ ಎಲ್ಲಾ ಸಮಾಚಾರವನ್ನೂ ಹೇಳುವೆಯಂತೆ !" ಎನ್ನುತ್ತ ಅಲ್ಲಿಂದ ಹೊರಟು ಹೋದಳು. ದಿಗಂಬರಿಯು ಮನಸಿನಲ್ಲೇ ಅಚ್ಚರಿಗೊಂಡು ಎಂದುಕೊಂಡಳು: ಅಬ್ಬ ! ಎಷ್ಟು ಕೋಪ, ನಾರಾಯಣಿಗೆ !

ಇಂತಹ ಒಂದು ಕಾಂಡವನ್ನು ಕ್ರಮವಾಗಿ—ಪೂರ್ತಿಯಾಗಿ ವರ್ಣಿಸುವ ಸಮಯ ದೊರಕದೆ ಇದ್ದುದಕ್ಕಾಗಿ, ಅವಳಿಗೆ ಅತ್ಯಂತ ದುಃಖವಾಯಿತು !

ರಾಮನು ನಡೆಸಿದ ಕೃತ್ಯದ ಸಂಕ್ಷಿಪ್ತ ಸಾರವಿಷ್ಟೆ;— ಆ ಊರಿನ ಶಾಲೆಯಲ್ಲಿ ಜಮೀನ್‌ದಾರರ ಮಗನೊಬ್ಬ ಓದುತ್ತಿದ್ದ. ಇಂದು ಮಧ್ಯಾಹ್ನದ ವಿರಾಮ-ವೇಳೆಯಲ್ಲಿ ಅವನಿಗೂ ರಾಮನಿಗೂ ಒಂದು ಚರ್ಚೆ ನಡೆಯಿತು. ವಿಷಯವು ಸ್ವಲ್ಪ ಜಟಿಲವಾಗಿಯೇ ಇತ್ತು; ಆದ್ದರಿಂದ ಅದರ ಮೀಮಾಂಸೆಯಾಗಲಿಲ್ಲ; ಇಬ್ಬರಿಗೂ ಹೊಡೆದಾಟವಾಯ್ತು. ಜಮೀನ್‌ದಾರರ ಮಗನೆಂದ: ಸ್ಮಶಾನಕಾಳಿಯು ರಕ್ಷಾಕಾಳಿಗಿಂತ ಹೆಚ್ಚು ಜಾಗೃತಳೆಂದು ಶಾಸ್ತ್ರದಲ್ಲಿ ಬರೆದಿದೆ ! ಏಕೆಂದರೆ ಅವಳ ನಾಲಿಗೆಯು ಬಹಳ ದೊಡ್ಡದು.

ರಾಮನು ಪ್ರತಿವಾದಿಸಿದ: ಎಂದಿಗೂ ಇಲ್ಲ ! ಸ್ಮಶಾನಕಾಳಿಯ ನಾಲಿಗೆಯು ಅಗಲವಾಗಿರುವುದೇನೋ ನಿಜ; ಆದರೆ ಅಷ್ಟೇನೂ ದೊಡ್ಡದಲ್ಲ, ಅಲ್ಲದೆ ಅಷ್ಟು ಕೆಂಪಾಗಿ ಕೂಡ ಇಲ್ಲ.

ಕೆಲವು ದಿನಗಳ ಹಿಂದೆ ಮೊಹಲ್ಲೆಯಲ್ಲಿ ಸಾರ್ವಜನಿಕ ರಕ್ಷಾಕಾಳಿಯ ಪೂಜೆಯಾಗಿತ್ತು. ಆ ಪೂಜೆಯ ಸ್ಮೃತಿಯು ರಾಮನ ಮನಸಿನಲ್ಲಿ ಇನ್ನೂ ನೆಲೆಸಿತ್ತು. ಜಮೀನ್‌ದಾರರ ಮಗನು ರಾಮನ ಮಾತನ್ನು ಒಪ್ಪದೆ, ತನ್ನ ಅಂಗೈಯನ್ನು ತೋರಿಸುತ್ತ, "ರಕ್ಷಾ-ಕಾಳಿಯ ನಾಲಿಗೆಯು ಇಷ್ಟೇ ಇದೆ !" ಎಂದ.

ರಾಮನಿಗೆ ಕೋಪವುಂಟಾಯಿತು. "ಅಷ್ಟೇ ಇದೆಯೇ ? ಎಂದಿಗೂ ಇಲ್ಲ !—ಅದು ಇಷ್ಟು ದೊಡ್ಡದಾಗಿದೆ !—ಅಷ್ಟು ಚಿಕ್ಕದಾಗಿದ್ದರೆ ಪೃಥ್ವಿ

ಯನ್ನು ಹೇಗೆ ರಕ್ಷಿಸಲಾಗುತ್ತಿತ್ತು? ಪೃಥ್ವಿಯನ್ನು ರಕ್ಷಿಸುವುದರಿಂದಲೇ ಆವಳಿಗೆ ರಕ್ಷಾಕಾಳಿಯೆಂದು ಹೆಸರು" ಎಂದ.

ಇಷ್ಟಾದ ನಂತರ ಇನ್ನೂ ಸ್ವಲ್ಪ ಚರ್ಚೆ ನಡೆಯಿತು. ಕಡೆಗೆ ಇಬ್ಬರಲ್ಲೂ ಹೊಡೆದಾಟವಾಯಿತು! ಜಮೀನ್‌ದಾರರ ಮಗನು ಸ್ವಲ್ಪ ನಿಃಶಕ್ತನಾಗಿದ್ದ. ಆದ್ದರಿಂದ ಅವನಿಗೇ ಹೆಚ್ಚು ಪೆಟ್ಟುಗಳು ಬಿದ್ದುವು. ಅವನ ಮೂಗಿನಿಂದ ಮೂರು ನಾಲ್ಕು ತೊಟ್ಟು ರಕ್ತವು ಸುರಿಯಿತು. ಈ ಶಾಲೆಯ ಪುಟ್ಟ ಜೀವನದಲ್ಲಿ ಇಷ್ಟು ದೊಡ್ಡ ದುರ್ಘಟನೆಯು ಇದುವರೆಗೂ ನಡೆದಿರಲಿಲ್ಲ. ಶಾಲೆಯು ಯಾವ ಜಮೀನ್‌ದಾರರದೋ ಅವರದೇ ಮಗನ ಮೂಗಿನಿಂದ ರಕ್ತವೆಂದರೇನು? ಮುಖ್ಯ ಅಧ್ಯಾಪಕರು ತಾವೇ ಶಾಲೆಯನ್ನು ಮುಚ್ಚಿ ವಿಷಯವನ್ನು ಜಮೀನ್‌ದಾರರಿಗೆ ತಿಳಿಸಲು, ಬಾಕಿ ಹುಡುಗರನ್ನೂ ಕರೆದು-ಕೊಂಡು ಹೊರಟರು; ಈ ಮಧ್ಯೆ ರಾಮನು ಎಲ್ಲೋ ಪರಾರಿ!—ಎಂಬ ವಿಷಯವನ್ನು ಹೇಳಬೇಕಾಗಿಯೇ ಇಲ್ಲ.

ಭೋಲನು ಬಂದು ಹೇಳಿದ: ಚಿಕ್ಕಬಾಬುಗಳು ಎಲ್ಲೂ ಸಿಕ್ಕಲಿಲ್ಲ! ತುಸು ಹೊತ್ತಿನ ಒಳಗೆ ಶಾಮಲಾಲನು ಪೆಚ್ಚು ಮೋರೆ ಹಾಕಿಕೊಂಡು ಮನೆಗೆ ಬಂದನು. ಅಂಗಳದಿಂದಲೇ ಹೇಳಿದ: ಕೇಳಿದೆಯಾ? ಇನ್ನು ಖಂಡಿತವಾಗಿಯೂ ಈ ಊರಿನಲ್ಲಿರುವುದು ಸಾಧ್ಯವಿಲ್ಲ. ಏನೋ ನೌಕರಿ-ಚಾಕರಿ ಮಾಡಿ ಒಂದೆರಡು ಕಾಸು ಸಂಪಾದಿಸುತ್ತಿದ್ದೆ; ಇನ್ನು ಅದೂ ತಪ್ಪಿ ಹೋಗುವಂತಾಯಿತು!

ನಾರಾಯಣಿಯು ಉಗ್ರಾಣದಿಂದ ಹೊರಗೆ ಬಂದು, ಬಾಗಿಲ ಚೌಕಟ್ಟನ್ನು ಹಿಡಿದು ನಿಂತು, ಶುಷ್ಕ ಕಂಠದಿಂದ ಕೇಳಿದಳು: ಏಕೆ? ಅವರು ಪೋಲೀಸಗೆ ಸಮಾಚಾರವಿತ್ತರೇ?

ಶಾಮಲಾಲನು ತಲೆಯಲ್ಲಾಡಿಸುತ್ತ ಹೇಳಿದ: ಜಮೀನ್‌ದಾರಬಾಬುಗಳು ದೇವರಂತಹ ಮನುಷ್ಯರು; ಆದ್ದರಿಂದಲೇ ಮನ್ನಿಸಿದರು. ಆದರೂ, ಇವನ ಉಪದ್ರವವು ದಿನಕ್ಕೊಂದು ಇದ್ದೇ ಇದೆ. ಹೀಗಿರುವಾಗ ನಾವು ಈ ಊರಿನಲ್ಲಿ ಮುಖವೆತ್ತಿಕೊಂಡು ಇರುವುದು ಸಾಧ್ಯವೇ, ನೀನೇ ಯೋಚಿಸು! ರಾಮನು ಈಗೆಲ್ಲಿ?

"ಇನ್ನೂ ಮನೆಗೇ ಬಂದಿಲ್ಲ. ಬಹುಶಃ ಹೆದರಿಕೆಯಿಂದ, ಅಲ್ಲೇ

ಅಲೆದಾಡುತ್ತಿರಬಹುದು. ” ಎಂದಳು ನಾರಾಯಣಿ. ಶಾಮುಲಾಲನು ಗಂಭೀರ ಧ್ವನಿಯಿಂದ ಹೇಳಿದ: ಅವನು ಮನೆಗೆ ಬರಲಿ, ಬರದೆ ಹೋಗಲಿ! ಇನ್ನು ಮುಂದೆ ನಮಗೂ ಅವನಿಗೂ ಯಾವ ಸಂಬಂಧವೂ ಇಲ್ಲ. ‘ಮಲತಾಯಿಯ ಮಗ’ ಎಂಬ ಮಾತು ಜನರ ಬಾಯಲ್ಲಿ ಬರದಿರಲೆಂದು, ಇದುವರೆಗೂ ಎಷ್ಟೋ ತೊಂದರೆಗಳನ್ನು ಸಹಿಸಿಕೊಂಡು, ನಿರ್ವಹಿಸುತ್ತ ಬಂದೆ! ಇನ್ನು ಸಾಧ್ಯವಿಲ್ಲ. ನನ್ನ ಪ್ರಾಣವನ್ನಾದರೂ ಉಳಿಸಿಕೊಳ್ಳಬೇಡವೇ ?

ದಿಗಂಬರಿಯು ಅಡಿಗೆಯ ಮನೆಯ ಅಂಗಳದಲ್ಲೇ ನಿಂತು ಹೇಳಿದಳು: ನಮ್ಮ ಮಗ—ಗೋವಿಂದ—ನನ್ನು ಕಾಪಾಡಿಕೊಳ್ಳಬೇಡವೇ? ಅವನ ವಿಷಯವನ್ನು ನೋಡಿಕೊಳ್ಳಬೇಡವೇ ?

ಶಾಮುಲಾಲನು ಉತ್ಸಾಹಿತನಾಗಿ ಹೇಳಿದ: ಅಲ್ಲದೆ ಮತ್ತೇನು? ಖಂಡಿತವಾಗಿಯೂ ನೋಡಿಕೊಳ್ಳಬೇಕು. ಆದ್ದರಿಂದ ನಾಳೆಯೇ ಪಂಚಾಯಿತರನ್ನು ಕರೆಸಿ ಧನ-ಸಂಪತ್ತಿಯನ್ನು ಭಾಗ ಮಾಡಿಸಿಬಿಡುವೆನು. ಮತ್ತು ಇದೋ—ನಿನಗೂ ಹೇಳಿರುವೆನು! ಈ ವಿಷಯವಾಗಿ ನೀನು ಅವನನ್ನು ಹೊಡೆದು-ಬೈದು ಮಾಡಬೇಕಾದ ಆವಶ್ಯಕತೆ ಇಲ್ಲ. ಅವನಿಗೆ ಯಾವುದು ಒಳ್ಳೆಯದೆಂದು ತೋರುವುದೋ, ಹಾಗೆಯೇ ಮಾಡಲಿ! ಅವನು ತಿಳಿದೂ-ತಿಳಿದೇ ಒಡೆಯನ ಮಗನ ಮೇಲೆ ಕೈಯೆತ್ತಿರುವನು!

ದಿಗಂಬರಿಗೆ ಮನಸಿನಲ್ಲೇ ಹಿಡಿಸಲಾರದಷ್ಟು ಸಂತೋಷ. ಅವಳೆಂದಳು: ನಾರಾಯಣಿಯು ಅವನನ್ನು ಏತಕ್ಕೆ ಹೊಡೆದು-ಬೈದು ಮಾಡುವಳೋ, ನಾನು ಬೇರೆ ಕಾಣೆ! ನನಗಂತೂ ಅವನನ್ನು ಕಂಡರೆ ಜೀವವೇ ಕಂಪಿಸುತ್ತದೆ! ಎಂತಹ ದುಷ್ಟ, ಉದ್ದಂಡ ಹುಡುಗ? ಅವನದೇನು, ಸ್ಥಿಮಿತ ಬುದ್ಧಿಯೇ ? ನನ್ನನ್ನೇ ಅಪಮಾನ ಮಾಡಿದವನಿಗೆ, ನಾರಾಯಣಿಯನ್ನು ಅಪಮಾನಗೊಳಿಸುವುದು ಒಂದು ಹೆಚ್ಚಿನ ವಿಷಯವೇ ? ಆದ್ದರಿಂದ ನಾನು ಹೇಳುವುದನ್ನು ಕೇಳು, ನಾರಾಯಣಿ! ನಿನ್ನ ಮರ್ಯಾದೆಯನ್ನು ನಿನ್ನ ಕೈಯಲ್ಲಿಟ್ಟುಕೋ! ಅವನ ತಂಟೆಗೆ ಹೋಗಬೇಡ.

ಶಾಮುಲಾಲನಿಗೆ ಅತ್ತಿಯ ಈ ಉಪದೇಶ-ವಾಣಿಯನ್ನು ಸಮರ್ಥಿಸಲಾಗಲಿಲ್ಲ. ಅವನು ಹೇಳಿದ: ಅದೇನೇ ಇರಲಿ; ಅಂತೂ ಅವನನ್ನು ದಂಡಿಸಲು ಯತ್ನಿಸಬೇಡ !

ನಾರಾಯಣಿಯು ಶಿಲೆಯ ಮೂರ್ತಿಯಂತೆ ನಿಶ್ಚಲ–ನೀರವಳಾಗಿ, ಎಲ್ಲವನ್ನೂ ಕೇಳುತ್ತ ನಿಂತಿದ್ದಳು. ಯಾರ ಮಾತಿಗೂ ಏನೂ ಉತ್ತರ ಕೊಡಲಿಲ್ಲ. ಸ್ವಲ್ಪ ಹೊತ್ತಿನ ಬಳಿಕ ತನ್ನ ಕೆಲಸಕ್ಕೆ ಹೊರಟುಹೋದಳು.

ಸುಮಾರು ಒಂದು ಗಂಟೆಯಾದ ನಂತರ ದಾಸಿಯು ಬಂದು "ಬಹೂಜೀ! ಚಿಕ್ಕ ಬಾಬು ಬಂದಿರುವರು!" ಎಂದಳು ಮೆಲ್ಲನೆ.

ನಾರಾಯಣಿಯು ಮೆಲ್ಲನೆ ಎದ್ದು ಬಂದು ರಾಮನ ಕೊಠಡಿಯನ್ನು ಪ್ರವೇಶಿಸಿ, ಒಳಗಿನಿಂದ ಚಿಲುಕವನ್ನು ಹಾಕಿಕೊಂಡಳು ರಾಮನು ಮಂಚದ ಮೇಲೆ ಕುಳಿತು ಏನನ್ನೋ ಯೋಚಿಸುತ್ತಿದ್ದ. ಅಗಣಿಯ ಶಬ್ದವನ್ನು ಕೇಳಿ, ಬೆಚ್ಚಿದ. ತಲೆಯೆತ್ತಿ ನೋಡಲಾಗಿ ಒಳಗಿನಿಂದ ಬಾಗಿಲು-ಚಿಲುಕವನ್ನು ಹಾಕಿಕೊಂಡಿದ್ದಳು ಎಂದೋ ಒಂದು ದಿನ ಅವನೇ ತಂದಿಟ್ಟಿದ್ದ ಸಣ್ಣ ಬೆತ್ತವನ್ನು ಕೈಗೆ ತೆಗೆದುಕೊಳ್ಳುತ್ತಿದ್ದಳು. ರಾಮನು ಹೆದರಿ, ಮಂಚದ ಆ ಕಡೆಗೆ ಹೋಗಿ ನಿಂತುಕೊಂಡ. ನಾರಾಯಣಿಯು ಕೋಪದಿಂದ "ಬಾ, ಇಲ್ಲಿ!" ಎಂದು ಕೂಗಿದಳು.

ರಾಮನು ಕೈಜೋಡಿಸಿ ದೀನ–ಸ್ವರದಿಂದ ಕೇಳಿಕೊಂಡ: ಇನ್ನು ಮಾಡುವುದಿಲ್ಲ. ಅತ್ತಿಗೆ! ಈ ಒಂದು ಬಾರಿ ಮನ್ನಿಸಿಬಿಡು!

ನಾರಾಯಣಿಯು ಕಠೋರ ಸ್ವರದಿಂದ ಹೇಳಿದಳು: ಸುಮ್ಮನೆ ಬಂದರೆ ಸರಿ; ಕಮ್ಮಿ ಏಟುಗಳನ್ನು ತಿನ್ನುವೆ; ಇಲ್ಲದಿದ್ದರೆ ನಿನ್ನ ಬೆನ್ನ ಮೇಲೇ ಈ ಬೆತ್ತ ಮುರಿಯುವವರೆಗೂ ಹೊಡೆಯುವೆನು, ತಿಳಿದೆಯಾ?

ರಾಮನು ಅಷ್ಟಾದರೂ ಕೇಳಲಿಲ್ಲ. "ನಿನ್ನ ಕಾಲಿಗೆ ಬೀಳುವೆನು; ಕೈ ಜೋಡಿಸಿ ನಮಸ್ಕರಿಸುವೆನು. ಅತ್ತಿಗೆ, ಇನ್ನು ಮಾಡುವುದಿಲ್ಲ. ಎಂದೆಂದೂ ಮಾಡುವುದಿಲ್ಲ! ಕಿವಿ ಹಿಂಡಿಕೊಳ್ಳುವೆನು, ಅತ್ತಿಗೆ!" ಎಂದು ದೀನ ಸ್ವರದಿಂದ ಬೇಡಿಕೊಂಡ.

ನಾರಾಯಣಿಯು ಮಂಚದ ಮೇಲಿಂದ ಬಗ್ಗಿ, ಅವನ ಬೆನ್ನ ಮೇಲೆ 'ಛಳ್–ಛಳ್ಳೆಂದು' ಏಟುಗಳ ಮೇಲೆ ಏಟುಗಳನ್ನು ಹೊಡೆಯತೊಡಗಿದಳು. ರಾಮನು ನೋವನ್ನು ತಡೆಯಲಾರದೆ. ಆ ಕಡೆಯ ಬಾಗಿಲನ್ನು ತೆಗೆದು ಓಡಿಹೋಗಲೇ! ಎಂದು ಯೋಚಿಸಿದ. ಬಳಿಕ, ಆತ್ಮ–ರಕ್ಷಣೆಗೋಸ್ಕರ ಕೊಠಡಿಯೆಲ್ಲಾ ಸುತ್ತು ಹಾಕಿದ! ಕೊನೆಗೆ ಅತ್ತಿಗೆಯ ಕಾಲುಗಳ ಮೇಲೆ

ಬಿದ್ದು ಅಳತೊಡಗಿದ. ನೃತ್ಯಕಾಳಿಯು ಹಿಂದೆ ನಿಂತು, ಕಿಟಕಿಯ ಕಂಡಿಯಿಂದ ಎಲ್ಲವನ್ನೂ ನೋಡುತ್ತಿದ್ದಳು.

ಅವಳಿಗೆ ಸಹ ಅಳುವನ್ನು ತಡೆಯಲಾಗಲಿಲ್ಲ. ಅಳು-ದನಿಯಿಂದ ಬೇಡಿಕೊಂಡಳು : ಬಹೂಜೀ ! ಸಾಕು, ಬಿಟ್ಟುಬಿಡಿರಿ ! ನಿಮ್ಮ ಕಾಲಿಗೆ ಬೀಳುವೆನು ಬಹೂಜೀ !

ದಿಗಂಬರಿಯು ಮುಖವನ್ನು ತಿರುಗಿಸುತ್ತ "ದಾಸೀ ! ನೀನೇಕೆ ಎಲ್ಲ ವಿಷಯಗಳಲ್ಲೂ ಕೈ ಹಾಕುವೆ ?" ಎಂದಳು.

ಶಾಮಲಾಲನು ಕೋಣೆಯೊಳಗಿಂದಲೇ ಹೇಳಿದನು: ಇದೇನು ಮಾಡುತ್ತಿರುವೆ ? ರಾತ್ರಿಯೆಲ್ಲಾ ಹೊಡೆಯುತ್ತಲೇ ಇರುವೆಯಾ ?

ನಾರಾಯಣಿಯು ಬೆತ್ತವನ್ನು ಬಿಸುಟು "ನೆನಪಿರಲಿ !" ಎಂದಳು.

---

೪

ರಾಮನು ರೊಟ್ಟಿಯನ್ನು ತಿನ್ನುತ್ತ ಕುಳಿತಿದ್ದ. ದಿಗಂಬರಿಯು ಬಾಗಿಲ ಹಿಂದಿನಿಂದ ಮೆಲು-ದನಿಯಲ್ಲಿ ಹೇಳಿದಳು: ಇಷ್ಟು ದೊಡ್ಡ ಹುಡುಗ ನನ್ನು ಹೀಗೆ ಹೊಡೆಯುವರೇ ! ಅವರ ಅಣ್ಣ ಅವನ ಮೇಲೆ ಕೈ ಸಹ ಎತ್ತುವುದಿಲ್ಲ

ನೃತ್ಯಕಾಳಿಯು ಕೆಲಸ ಮಾಡುತ್ತಿರುವಂತೆಯೇ ಹೇಳಿದಳು: ನೀವೇನೂ ಸಾಮಾನ್ಯದವರಲ್ಲ, ಅಜ್ಜಿಯವರೇ, ನೀವೇ ಎಲ್ಲರಿಗೂ ಹಚ್ಚಿ ಕೊಡುವುದು.

ರಾತ್ರಿಯ ಅಷ್ಟೊಂದು ಏಟುಗಳು ಅವಳಿಗೆ ಸರಿ ಬೀಳಲಿಲ್ಲ. ರಾಮನು ಕೋಪದಿಂದ ಕಣ್ಣುಗಳನ್ನು ಕೆರಳಿಸಿ ಹೇಳಿದ: ಈ ಪಿಶಾಚಿ ಮುದುಕಿಯು ನಮ್ಮೆಲ್ಲರ ಪ್ರಾಣವನ್ನೂ ತಿನ್ನಲು ಬಂದಿರುವಳು.

"ಕೇಳು, ನಾರಾಯಣೀ,—ನಿನ್ನ ವೈದುನನ ಮಾತನ್ನು ! ಕೇಳು !" ಎಂದು ಕೂಗಿಕೊಂಡಳು ದಿಗಂಬರಿ.

ನಾರಾಯಣಿಯು ಸ್ನಾನಮಾಡಲು ಹೋಗುತ್ತಿದ್ದಳು. ಹಿಂತಿರುಗಿ ಬಂದು ಜಿಗುಪ್ಸೆಯಿಂದ ನುಡಿದಳು: ಇನ್ನಾವ ಮಾತುಗಳನ್ನೂ ಕೇಳುವ

ಶಕ್ತಿ ನನ್ನಲ್ಲಿಲ್ಲ, ಅಮ್ಮ! ನಿಜವಾಗಿಯೂ ಹೇಳುವೆನು, ನಿತ್ರೋ! ಸತ್ತಾದರೂ ಹೋದರೆ ನನಗೆ ಶಾಂತಿ ಸಿಗುವುದು. ಇನ್ನು ಸಹಿಸಲಾರೆ! ಎಲೋ ಕಪಿಯೇ! ಇನ್ನೂ ನಿನ್ನ ಬೆನ್ನ ಮೇಲಿನ ಗುರುತು ಸಹ ಮಾಸಿಲ್ಲ; ಆಗಲೇ ಮರೆತೆಯಾ?

ರಾಮನು ಉತ್ತರ ಕೊಡಲಿಲ್ಲ; ರೊಟ್ಟಿಯನ್ನು ತಿನ್ನುತ್ತಿದ್ದ. ನಾರಾಯಣಿಯು ಮತ್ತೇನೂ ಹೇಳದೆ ಸ್ನಾನಕ್ಕೆ ಹೊರಟುಹೋದಳು. ಅಂಗಳದ ಒಂದು ಮೂಲೆಯಲ್ಲಿ ಸೀಬೆಯ ಮರವೊಂದಿತ್ತು. ರೊಟ್ಟಿ ತಿಂದ ನಂತರ, ರಾಮನು ಅದರ ಮೇಲೆ ಹತ್ತಿ ಕುಳಿತು, ಅತ್ಯಂತ ಅಲಕ್ಷ್ಯದಿಂದ ಹಣ್ಣು— ಕಾಯಿ ಎಂದು ಸಹ ಗಣಿಸದೆ, ಒಂದೊಂದೇ ಕಾಯಿಗಳನ್ನು ಕಚ್ಚಿ ತಿನ್ನ ತೊಡಗಿದ. ಕೆಲವನ್ನು ಪೂರ್ತಿ ತಿಂದ; ಕೆಲವನ್ನು ಅರ್ಧ ಕಚ್ಚಿ ಬಿಸುಟ; ಮತ್ತು ಕೆಲವು ಒಳ್ಳೆಯ ಹಣ್ಣುಗಳನ್ನು ನಿರರ್ಥಕವಾಗಿ ಕಿತ್ತು ಕಿತ್ತು ಒಗೆದ. ಇದೆಲ್ಲಾ ನೋಡಿ, ದಿಗಂಬರಿಯು ಒಳಗಿಂದೊಳಗೇ ಉರಿದು ಬೆಂಕಿಯಾಗುತ್ತಿದ್ದಳು. ನಾರಾಯಣಿಯು ಇನ್ನೂ ಮನೆಗೆ ಬಂದಿರಲಿಲ್ಲ, ದಿಗಂಬರಿಗೆ ಸಹಿಸಲಾಗಲಿಲ್ಲ; ಹೇಳಿದಳು: ನಿನ್ನ ದೆಸೆಯಿಂದ ಸೀಬೆಯ ಹಣ್ಣಿನ ಮುಖ ನೋಡುವುದು ಸಹ ದುರ್ಧರವಾಗಿ ಹೋಗಿದೆ. ಸೀಬೆಯ ಕಾಯಿಗಳನ್ನು ಕಿತ್ತು ಕಿತ್ತು ಏನು ಮಾಡುತ್ತಿರುವೆ?

ರಾಮನಿಗೆ ಕವಳ ಮಾತನ್ನು ಸಹಿಸುವುದಕ್ಕೇ ಆಗಲಿಲ್ಲ. ಅದರಲ್ಲೂ— ತನ್ನನ್ನು ಅತ್ತಿಗೆಯು ಅಷ್ಟೊಂದು ಹೊಡೆದುದಕ್ಕೆ ಮೂಲ ಕಾರಣವೇ ಈ ಮುದುಕಿಯೆಂದು ತಿಳಿದ ಬಳಿಕಲಂತೂ, ಅವನಿಗೆ ಕೋಪವನ್ನು ತಡೆಯಲಾಗಲಿಲ್ಲ. ಮರದ ಮೇಲಿಂದಲೇ ಹೇಳಿದ: ಏನು ಮಾಡುವೆನೇ? ಒಳ್ಳೇಯದನ್ನೇ ಮಾಡುವೆನು; ಇನ್ನೂ ಮಾಡುವೆನು! ಮುದುಕಿ!

'ಮುದುಕಿ' ಎಂದು ಹೇಳಿದರೆ ದಿಗಂಬರಿಗೆ ಬಹಳ ಕೋಪ ಬರುತ್ತಿತ್ತು. ಹಲ್ಲುಗಳನ್ನು ಕಡಿಯುತ್ತ ಹೇಳಿದಳು: ಮುದುಕಿಯಂತೆ! ಇನ್ನೂ ಮಾಡುವನಂತೆ! ತಾಳು. ನಾರಾಯಣಿಯು ಬರಲಿ! ನಾಯಿಗೆ ತಕ್ಕಂತೆ ಕೋಲೂ ಇರಬೇಕು! ಏನು ನಾಚಿಕೆಗೆಟ್ಟ ಹುಡುಗನಮ್ಮಾ?—ಏಟುಗಳನ್ನು ತಿಂದು ಬೆನ್ನಿನ ಚರ್ಮ ಸುಲಿದುಹೋದರೂ, ಸ್ವಲ್ಪವೂ ನಾಚಿಕೆ-ಮಾನವಿಲ್ಲ!

ರಾಮನು ಮರದ ಮೇಲಿಂದಲೇ "ಪಿಶಾಚಿ ಮುದುಕಿ!" ಎಂದ.

"ಎಷ್ಟು ಅಹಂಕಾರದ ಮಾತನ್ನಾಡುವೆ, ನೀಚ! ಇಳಿ, ಮರದ ಮೇಲಿಂದ! ಈ ಕ್ಷಣ ಇಳಿ!

"ಏಕೆ ಇಳಿಯಲಿ? ಮರವು ನಿಮ್ಮಪ್ಪನದೇ?"

ದಿಗಂಬರಿಗೆ ಮಿತಿಮೀರಿದ ಕೋಪವುಂಟಾಯಿತು. ಗಟ್ಟಿಯಾಗಿ ಕಿರಿಚಿಕೊಳ್ಳುತ್ತ "ಅಂ! ಏನೆಂದೆ? ಅಪ್ಪನವರೆಗೆ ಹೋಗುವೆಯಾ? ಕೇಳಿದೆಯಾ ನಿತ್ತೋ, ಕೇಳಿದೆಯಾ?" ಎಂದಳು.

ಅದೇ ಸಮಯಕ್ಕೆ ಸರಿಯಾಗಿ ನಾರಾಯಣಿಯು ನದಿಯಿಂದ ಹಿಂತಿರುಗಿದಳು ಮರದ ಮೇಲೆ ದೃಷ್ಟಿ ಬೀಳುತ್ತಲೇ ಹೇಳಿದಳು: ಏನೋ, ಊಟ ಮಾಡಿ ನೀನು ಶಾಲೆಗೆ ಹೋಗಲಿಲ್ಲವೇ— ಮರದ ಮೇಲೆ ಕುಳಿತಿರುವೆ?

ಅತ್ತಿಗೆಯು ಅಷ್ಟು ದೂರದಿಂದ ಬರುವುದನ್ನು ನೋಡುತ್ತಿದ್ದಾಗಲೇ, ಮರದಿಂದಿಳಿದು ಓಡಿ ಹೋಗಬೇಕೆಂದು ರಾಮನು ಯೋಚಿಸಿದ್ದ. ಆದರೆ ಈ ಜಗಳದಲ್ಲಿ ತೊಡಗಿದ್ದರಿಂದ ಅವನಿಗೆ ಆ ಕಡೆಯ ಧ್ಯಾನವೇ ಇರಲಿಲ್ಲ. ಅತ್ತಿಗೆಯು ಅಂಗಳದಲ್ಲಿ ಬಂದು ನಿಂತೇಬಿಟ್ಟಳು! ಮಾಡುವುದೇನು? ಅದನು ಹೆದರುತ್ತ ಹೇಳಿದ: ಸೀಬೆಯ ಹಣ್ಣು ತಿನ್ನುತ್ತಿದ್ದೆ.

"ಅದಿರಲಿ! ಶಾಲೆಗೇಕೆ ಹೋಗಲಿಲ್ಲ, ಹೇಳು!"

"ಹೊಟ್ಟೆ ನೋಯುತ್ತಿದೆ............"

ನಾರಾಯಣಿಗೆ ಬಹಳ ಕೋಪವುಂಟಾಯಿತು. "ಅದಕ್ಕೋಸ್ಕರವೇ ಊಟ ಮಾಡಿ, ಸೀಬೆಯ ಕಾಯಿ ತಿನ್ನುತ್ತಿರುವೆಯಾ?" ಎಂದಳು.

ದಿಗಂಬರಿಯು ಮಗಳ ಧ್ವನಿಯನ್ನು ಕೇಳುತ್ತಲೇ ಓಡಿ ಬಂದಳು. "ನೀಚನನ್ನು ನೋಡಿದೆಯಾ? ನಮ್ಮಪ್ಪನ ವರೆಗೂ ಮಾತನಾಡುವನು! ಏತಕ್ಕೆ ಇಳಿಯಲಿ, ನಿಮ್ಮಪ್ಪನದೇ ಮರ?—ಎಂದು ಕೇಳುವನು." ಎಂದಳು.

ನಾರಾಯಣಿಯು ಅವನ ಕಡೆ "ನೋಡಿ ಏನೋ! ನೀನು ಹೇಳಿದೆಯಾ?"

ರಾಮನು ಮುಖವನ್ನು ಸಿಡುಕಿಸಿಕೊಂಡು "ಇಲ್ಲ, ಅತ್ತಿಗೆ! ನಾನು ಹೇಳಲಿಲ್ಲ! ಎಂದ.

ದಿಗಂಬರಿಯು ಕಿರಿಚಿ ಹೇಳಿದಳು: ಹೇಳಲಿಲ್ಲವೇ, ನೀಚ! ಹೇಳಲಿಲ್ಲವೇ? ನಿತ್ತೋ ಎಲ್ಲವನ್ನೂ ಕೇಳಿಕೊಂಡೇ ಇದ್ದಳು! ನಂತರ ಸಾನುನಾಸಿಕ ಸ್ವರದಿಂದ ಹೇಳಿದಳು—ಆ ದಿನ ಏಟಿನ ಮೇಲೆ ಏಟು ಬೀಳುತ್ತಿದ್ದಾಗ 'ಇನ್ನು

ಮಾಡುವುದಿಲ್ಲ ಅತ್ತಿಗೆ! ನಿನ್ನ ಕಾಲಿಗೆ ಬೀಳುವೆನು—ಕೈ ಜೋಡಿಸಿ ನಮಸ್ಕರಿಸುವೆನು. ಇನ್ನು ಮಾಡುವುದಿಲ್ಲ!' ಎನ್ನುವಾಗ ಹೇಗಿತ್ತು? ಕೈಗೆ ಸಿಕ್ಕಾಗ ಮಿಲಿಮಿಲಿಗುಟ್ಟುವನು, ಬಿಟ್ಟುಬಿಟ್ಟರೆ ಕುಣಿದಾಡುವನು! ನೀಚ!

ರಾಮನಿಗೆ ಸಹಿಸಲಾಗಲಿಲ್ಲ. ಅವನ ಕೈಯಲ್ಲಿ ಒಂದು ಸೀಬೆಯ ಕಾಯಿತ್ತು,—ಅದನ್ನು ಬೀಸಿ ಎಸೆದ. ಆದರೆ ಅದು ದಿಗಂಬರಿಯನ್ನು ಮುಟ್ಟಿ ಸಹ ಮುಟ್ಟಲಿಲ್ಲ—ನಾರಾಯಣಿಯ ಎಡ ಹುಬ್ಬಿನ ಮೇಲೆ ಬಲವಾಗಿ ತಾಕಿತು. ಕ್ಷಣಕಾಲ ಅವಳ ಕಣ್ಣುಗಳಿಗೆ ಕತ್ತಲೆ ಕವಿದಂತಾಯಿತು; ಅಲ್ಲೇ ಕುಳಿತುಬಿಟ್ಟಳು. ದಿಗಂಬರಿಯು ಕೆಟ್ಟ ಧ್ವನಿಯಿಂದ ಕಿರಿಚಿಕೊಂಡಳು. ದಾಸಿಯು ಮಾಡುತ್ತಿದ್ದ ಕೆಲಸವನ್ನು ಬಿಟ್ಟು ಓಡಿಬಂದಳು ರಾಮನು ಮರದಿಂದ ನೆಗೆದು, ಬೀಳುವುದೇಳುವುದನ್ನೂ ಕಾಣದೆ ಓಡಿಹೋದ.

ಮಧ್ಯಾಹ್ನ ಶಾಮುಲಾಲನು ಊಟಕ್ಕೆ ಬಂದಾಗ, ಎಲ್ಲ ವಿಷಯವನ್ನು ಹೇಳಿದ. ನಾರಾಯಣಿಯು ನಿರ್ಜೀವಳಂತೆ ಮಂಚದ ಮೇಲೆ ಮಲಗಿದ್ದಳು. ಅವಳ ಎಡಗಣ್ಣು ಊದಿ ಹೋಗಿತ್ತು. ಅದರ ಮೇಲೆ ಒದ್ದೆ ಬಟ್ಟೆಯ ಪಟ್ಟಿ ಕಟ್ಟಿ, ನೃತ್ಯಕಾಳಿಯು ಬೀಸಣಿಕೆಯಿಂದ ಬೀಸುತ್ತಿದ್ದಳು.

ದಿಗಂಬರಿಯು ಈ ದಿನ ಬಾಗಿಲ ಮರೆಯಲ್ಲಿ ನಿಂತುಕೊಳ್ಳದೆ, ಎದುರಿಗೇ ಬಂದು, ಬಿಕ್ಕಿ ಬಿಕ್ಕಿ ಅಳುತ್ತ "ರಾಮನು ಇಂದು ನಾರಾಯಣಿಯನ್ನು ಹೊಡೆದುಬಿಟ್ಟ!" ಎಂದು ಹೇಳಿದಳು.

ಶಾಮುಲಾಲನು ಸಂಶಯದಿಂದ ಗಾಬರಿಗೊಂಡ. ಹತ್ತಿರ ಹೋಗಿ, ಅವಳ ಗಾಯವನ್ನು ಪರೀಕ್ಷಿಸಿ ನೋಡಿದ. ನಂತರ ಕಠೋರತೆಯಿಂದ ಹೇಳಿದ: ಇಂದು ನಿನಗೆ ಖಂಡಿತ ಹೇಳಿರುವೆನು! ನನ್ನ ಮೇಲಾಣೆ! ಅವನಿಗೆ ಊಣಬಡಿಸುವುದಕ್ಕಾಗಲೀ ತಿಂಡಿ ಕೊಡುವುದಕ್ಕಾಗಲಿ, ಅವನಿಗೆ ಸಂಬಂಧಿಸಿದ ಮತ್ತಾವ ವಿಷಯಕ್ಕಾಗಲೀ ನೀನು ಹೋದೆಯಾದರೆ ನನ್ನ ತಲೆ ತಿಂದಂತೆ!—ಎಂದು ಆಣೆ ಇಟ್ಟುಕೊಂಡ.

ನಾರಾಯಣಿಯು ಕಂಪಿತ ಸ್ವರದಿಂದ ನುಡಿದಳು: ಸುಮ್ಮನಿರಿ! ಇಂತಹ ಮಾತುಗಳನ್ನು ಬಾಯಿಂದ ಉಚ್ಚರಿಸಬೇಡಿರಿ!

ಶಾಮುಲಾಲನೆಂದ: ಈ ದಿನದ ನನ್ನ ಆಣೆಯನ್ನು ಅಲಕ್ಷಿಸಿ ನಡೆದೆ

ಯಾದರೆ, ಅಂದೇ ನಿನಗೆ ನನ್ನ ಮೃತ ಮುಖವನ್ನು ನೋಡುವಂತಾಗಲಿ!—ಹೀಗೆನ್ನುತ್ತ, ಅವನು ಡಾಕ್ಟರನ್ನು ಕರೆತರಲು ಹೊರಟುಹೋದ.

ರಾಮನು ದಿನವೆಲ್ಲಾ ನದಿಯ ದಡದಲ್ಲಿ, ಅಲ್ಲಿ—ಇಲ್ಲಿ ಅಲೆದು, ಸೂತು ಕುಳಿತು ಸಾಕಾಗಿ, ಸಂಭವ–ಅಸಂಭವ ವಿಷಯಗಳನ್ನೆಲ್ಲಾ ಮನಸಿನಲ್ಲಿ ಕಲ್ಪನೆ ಮಾಡಿಕೊಳ್ಳುತ್ತ, ಕತ್ತಲಾದ ಮೇಲೆ ಮನೆಗೆ ಬಂದ. ನೋಡಲಾಗಿ ಮನೆಯ ಅಂಗಳದ ಮಧ್ಯಕ್ಕೆ ಸರಿಯಾಗಿ ಬೇಲಿಯನ್ನು ಕಟ್ಟಿ, ಮನೆಯನ್ನು ಎರಡು ಭಾಗವಾಗಿ ವಿಭಾಗಿಸಲಾಗಿತ್ತು. ಬೇಲಿಯನ್ನು ಕಿತ್ತು ಹಾಕಲು ಪ್ರಯತ್ನಿಸಿದ; ಜೋರಾಗಿ ಅಲ್ಲಾಡಿಸಿದ. ಆದರೆ ಅದು ಬಹಳ ಗಟ್ಟಿಯಾಗಿತ್ತು, ಕೀಳಲು ಸಾಧ್ಯವಾಗಲಿಲ್ಲ. ಅಡಿಗೆಯ ಮನೆಯಲ್ಲಿ ದೀಪ ಉರಿಯುತ್ತಿತ್ತು; ಅಲ್ಲೊಮ್ಮೆ ಇಣಕಿನೋಡಿದ. ಅಲ್ಲೂ ಅದೇ ದೃಶ್ಯವು ಗೋಚರವಾಯಿತು. ಯಾರೂ ಇರಲಿಲ್ಲ; ಕೇವಲ ಪಾತ್ರೆಗಳ ರಾಶಿಯು ನೆಲದ ಮೇಲಿತ್ತು. ವಿಷಯವೇನೆಂಬುದು ಅವನಿಗೆ ಸ್ಪಷ್ಟವಾಗಿ ತಿಳಿಯದಿದ್ದರೂ, ಅಂತೂ ಬೆಳಗ್ಗೆ ನಡೆದ ದುರ್ಘಟನೆಗೂ ಇದಕ್ಕೂ ಏನೋ ಸಂಬಂಧವಿದೆಯೆಂದು ತಿಳಿದು ಅವನ ಹೃದಯವು ಕಂಪಿಸಿತು. ದಿಕ್ಕು ತೋರದಂತಾಯಿತು. ಅವನು ಸುಮ್ಮನೆ ತನ್ನ ಕೊಠಡಿಯಲ್ಲಿ ಹೋಗಿ ಕುಳಿತು, ಮನೆಯ ಇನ್ನೊಂದು ಭಾಗದಲ್ಲಿ ಏನು ನಡೆಯುತ್ತಿದೆಯೆಂಬುದನ್ನು ತಿಳಿಯಲು—ಕುತೂಹಲದಿಂದ ಕಿವಿಗೊಟ್ಟು ಕೇಳತೊಡಗಿದನು. ಮನೆಗೆ ಬರುವ ಮುಂಚಿತವಾಗಿ ತನಗಾಗಿದ್ದ ಅಸಾಧ್ಯ ಹಸಿವೆಯನ್ನು ಸಹ ಈಗ ಮರೆತುಬಿಟ್ಟ. ಸುಮಾರು ಒಂಭತ್ತು ಗಂಟೆಯಿರಬಹುದು. ಅಂಗಳವನ್ನು ಸುತ್ತಿಕೊಂಡು, ಹಿಂದಿನಿಂದ ಬಂದು ಹಿಂಬಾಗಿಲನ್ನು ತಟ್ಟಿದ. ದಾಸಿಯು ಬಾಗಿಲನ್ನು ತೆರೆದು ದೂರ ಹೋಗಿ ಸುಮ್ಮನೆ ನಿಂತಳು.

"ಅತ್ತಿಗೆ ಎಲ್ಲಿ ?" ಎಂದ ರಾಮ.

"ಕೊಠಡಿಯಲ್ಲಿ ಮಲಗಿಕೊಂಡಿರುವರು.

ರಾಮನು ಕೊಠಡಿಯನ್ನು ಪ್ರವೇಶಿಸಿ ನೋಡಿದ;—ಅತ್ತಿಗೆಯು ಮಂಚದ ಮೇಲೆ ಮಲಗಿದ್ದಳು. ದಿಗಂಬರಿಯು ಕೆಳಗಡೆ ಚಾಪೆಯ ಮೇಲೆ ತನ್ನ ಚಿಕ್ಕಮಗಳ ಸಂಗಡ ಕುಳಿತಿದ್ದಳು. ಗೋವಿಂದನು ಆಟವಾಡುತ್ತಿದ್ದ; ರಾಮನನ್ನು ನೋಡುತ್ತಲೇ ಓಡಿ ಬಂದು, ಅವನ ಕೈಹಿಡಿದುಕೊಂಡು ತೂಗಾಡಿದ. ನಂತರ ಹೇಳಿದ: ಚಿಕ್ಕಪ್ಪ! ಇನ್ನು ಮೇಲೆ ನಿನ್ನ ಹುನೆ

ಅಲ್ಲಿ—ನಮ್ಮ ಮನೆ ಇಲ್ಲಿ! ಇಲ್ಲಿಗೆ ಬಂದರೆ ನಿನ್ನ ಕಾಲನ್ನು ಮುರಿದುಬಿಡು ವೆನೆಂದು ಹೇಳಿರುವರು ಅಪ್ಪ!

ರಾಮನು ನಾರಾಯಣಿಯು ಮಲಗಿದ್ದ ಮಂಚದ ಮೇಲೆ, ಅವಳ ಕಾಲ ಬಳಿ ಹೋಗಿ ಕುಳಿತನು. ನಾರಾಯಣಿಯು ಕಾಲನ್ನು ಮುದುರಿ ಕೊಂಡಳು. ರಾಮು ಸುಮ್ಮನೆಯೇ ಕುಳಿತಿದ್ದ. ದಿಗಂಬರಿಯು ಮಗಳ (ಸುರಧುನಿಯ) ಬೆನ್ನನ್ನು ತಿವಿಯುತ್ತ "ಸುರೋ! ನಿಮ್ಮ ಭಾವ ಏನೇನು ಹೇಳಿದರೆಂಬುದನ್ನು ಚಿಕ್ಕಪ್ಪನಿಗೆ ಹೇಳುವುದಿಲ್ಲವೇ? ಹೇಳು!" ಎಂದಳು.

ಸುರಧುನಿಯು ಕಂಠಪಾಠ ಮಾಡಿದ ಗಿಣಿಯಂತೆ ತಾಯಿ ಹೇಳಿಕೊಟ್ಟಿದ್ದೆಲ್ಲವನ್ನೂ ಬೇಗಬೇಗನೆ ಹೇಳತೊಡಗಿದಳು: ನೀನು ಇಲ್ಲಿಗೆ ಬರಕೂಡ ದೆಂದು ಭಾವನವರು ಹೇಳಿರುವರು. ನಾಳೆ ಬೆಳಗ್ಗೆ............ಆ ಮೇಲೆ ಏನಮ್ಮಾ?

ದಿಗಂಬರಿಯು ಹೇಳಿದಳು: "ಆಸ್ತಿ ಜಮೀನು—"

ಸುರಧುನಿಯು ಮುಂದೆ ಹೇಳಿದಳು: ಜಮೀನು-ಆಸ್ತಿಯೆಲ್ಲವನ್ನೂ ಭಾಗ ಮಾಡಿಬಿಡುವರು.

"ಅವರು ಆಣೆಯಿಟ್ಟುಕೊಂಡ ವಿಷಯವನ್ನು ಏಕೆ ತಿಳಿಸಲಿಲ್ಲ? ಅಷ್ಟರಲ್ಲೇ ಮರೆತುಬಿಟ್ಟೆಯಾ, ಮುಂಕೇ!" ಎಂದಳು ದಿಗಂಬರಿ.

"ಹೌದು, ಮರೆತೇ ಬಿಟ್ಟೆ! ಅವನಿಗೆ ಊಟಕ್ಕೆ ಬಡಿಸಬೇಡ, ತಿಂಡಿ ಕೊಡಬೇಡ, ಅವನ ಸಂಗಡ ಮಾತನ್ನೂ ಆಡಬೇಡ ಎಂದು ಭಾವನವರು ಅಕ್ಕನ ಸಂಗಡ ಆಣೆಯಿಟ್ಟುಕೊಂಡಿರುವರು" ಎಂದಳು ಸುರಧುನಿ.

ನಾರಾಯಣಿಯು ಮಲಗಿದ್ದಲ್ಲಿಂದಲೇ "ಸರಿ ಸರಿ! ಎಲ್ಲಾ ಬಹಳ ಒಳ್ಳೆಯದು! ನೀನು ಸುಮ್ಮನಿರು!" ಎಂದು ಗದರಿದಳು.

ದಿಗಂಬರಿಯು ಹೇಳತೊಡಗಿದಳು: ಹೌದು; ಅವರು ಒಳ್ಳೆಯದನ್ನೇ ಮಾಡಿದರು. ನಿನ್ನದೇನು ಸಿಮಿತ ಬುದ್ಧಿಯೇ? ನಾಳೆ ಯಾರನ್ನಾದರೂ ಕೊಲೆ ಮಾಡಿದರೂ ಮಾಡಿಬಿಡುವೆ! ಆಗ ಅವರಿಗಲ್ಲವೇ ಕಷ್ಟ-ಅವಮಾನ ಗಳೆಲ್ಲ? ಅವರು ಆಣೆಯಿಟ್ಟುಕೊಂಡದ್ದು ಒಳ್ಳೆಯ ಕೆಲಸವೇ ಆಯಿತು. ಯಾರು ಏನೆಂದರೂ ಸರಿಯೆ, ನನ್ನ ಮನಸಿಗೆ ಅವರು ಮಾಡಿದ ಕೆಲಸ ಸಮ್ಮತ! ಇನ್ನು ಮೇಲೆ ನೀನು ಈ ಮನೆಗೆ ಬರುವುದು-ಹೋಗುವುದು,

ಊಟ ಮಾಡುವುದು—ಯಾವುದೂ ಸರಿಹೋದದು ! ಅದೂ ಅಲ್ಲದೆ ಪತಿಯು ಇಟ್ಟುಕೊಂಡ ಆಣೆಯಂತೆ ನಡೆಯಬೇಕಾದದು ಅವಳ ಕರ್ತವ್ಯವಲ್ಲವೇ ?— ಎಂದಳು.

ಆ ವೇಳೆಗೆ ಸುರಧುನಿಯು "ಅಮ್ಮಾ! ಹಸಿವೆಯಾಗುತ್ತಿದೆ, ಊಟ ಮಾಡೋಣ, ಬಾ ! " ಎಂದಳು.

ದಿಗಂಬರಿಯು ಅವಳ ಕೈಹಿಡಿದು ತಡೆದು " ಸ್ವಲ್ಪ ತಡೆ, ಸುರೋ ! " ಎಂದಳು.

ರಾಮನು ಮನೆಯಲ್ಲೇ ಕುಳಿತಿರುವನು; ಅಂದಬಳಿಕ ಮನೆಗೆ ಬೆಂಕಿ ಹೊತ್ತಿಕೊಂಡರೂ ಅವಳು ಆ ಸ್ಥಳವನ್ನು ಬಿಟ್ಟು ಕದಲಲಾರಳು. ರಾಮನು ತನ್ನ ಹೃದಯದಲ್ಲಿನ ದುಃಖವನ್ನೂ, ಉಕ್ಕಿ ಬರುತ್ತಿದ್ದ ಅಳುವನ್ನೂ ತಡೆಯು ಲಾರದೆ ತಡೆದುಕೊಂಡಿದ್ದ, ದಿಗಂಬರಿಯು ಇಂದಿನ ಬೆಳಿಗ್ಗೆ 'ಇಲ್ಲ ಅತ್ತಿಗೆ. ಇನ್ನು ಮಾಡುವದಿಲ್ಲ! ಕಾಲಿಗೆ ಬೀಳುವೆನು!' ಎಂದು ಮುಂತಾಗಿ-ಮೋರೆಯನ್ನು ವಿಧವಿಧವಾಗಿ ಮಾಡಿಕೊಂಡು ಪರಿಹಾಸ್ಯ ಮಾಡಿದ್ದ ವ್ಯಂಗ್ಯ ವಾಕ್ಯಗಳು ಅವನ ನೆನಪಿಗೆ ಬಂದು, ಅವನ ಅಳುವನ್ನು ಅದುಮಿರಿಸಿದ್ದುವು. 'ಇಲ್ಲ ಅತ್ತಿಗೆ ! ಇನ್ನೆಂದೂ ಮಾಡುವುದಿಲ್ಲ ! ' ಎಂದೊಮ್ಮೆ ನುಡಿಯಲು ಸಹ ಅವನಿಂದಾಗಲಿಲ್ಲ. ಈ ಒಂದು ವಾಕ್ಯವು ಇದುವರೆಗೂ ಅವನನ್ನು ಎಷ್ಟೋ ಆಪತ್ತು-ವಿಪತ್ತುಗಳಿಂದ ರಕ್ಷಿಸಿತ್ತು. ಆದರೆ ಇಂದು ಆ ವಾಕ್ಯವನ್ನು ಸಹ ಉಚ್ಚರಿಸಲಾರದೆ ಹೋದದ್ದರಿಂದ ಅವನಿಗೆ ಒಳಗಿಂದೊಳಗೇ ಉಸಿರು ಕಟ್ಟಿದಂತಾಯಿತು !

ಅಷ್ಟರಲ್ಲಿ ನಾರಾಯಣಿಯು ನಿಶ್ಶಕ್ತ-ಸ್ವರದಿಂದ ಹೇಳಿದಳು : ಅವನಿಗೆ ಹೋಗೆಂದು ಹೇಳು, ಸುರೋ !

"ಹೌದು, ಹೋಗೆಂದು ಹೇಳಬೇಕಂತೆ ! ನನಗೇನು ಹಸಿವೆಯಾಗು ವುದಿಲ್ಲವೇ? ಆಗಿನಿಂದಲೂ ಊಟ ಮಾಡಿಲ್ಲ!" ಎಂದ ಅಳುದನಿಯಿಂದ ರಾಮ.

ನಾರಾಯಣಿಯು ಸ್ವಲ್ಪ ಉತ್ತೇಜಿತಳಾಗಿ ನುಡಿದಳು : ಒಂದೇ ಏಟಿಗೆ ಕೊಂದುಹಾಕಿ ಬಿಡಲಿಲ್ಲವೇಕೆ ? ಆಗ ಒಂದಲ್ಲ—ಹತ್ತು ಕೈಗಳಿಂದ ತಿನ್ನ

ಬಹುದಾಗಿತ್ತು ? ನನಗೇನೂ ಗೊತ್ತಿಲ್ಲ; ಮನಬಂದಂತೆ ಮಾಡಲಿ! ನೃತ್ಯ ಕಾಳಿಯ ಹತ್ತಿರಕ್ಕೆ ಹೋಗಲಿ!

“ನಾನು ಅವಳ ಬಳಿ ಹೋಗುವುದಿಲ್ಲ; ಯಾರ ಬಳಿಗೂ ಹೋಗುವುದಿಲ್ಲ! ಊಟವನ್ನೇ ಮಾಡವೆ ಉಪವಾಸವಿದ್ದು ಸಾಯುವೆನು!” ಎಂದು ಧಮಧಮನೆ ಕಾಲುಗಳನ್ನು ನೆಲಕ್ಕೆ ಅಪ್ಪಳಿಸುತ್ತ, ಮನೆ ಹಾರಿ ಹೋಗುವಂತೆ ಕಿರಿಚಿಕೊಂಡ. ಮತ್ತು ಅಲ್ಲಿಂದ ಬಂದು ತನ್ನ ಮಂಚದ ಮೇಲೆ ಸುಮ್ಮನೆ ಮಲಗಿಕೊಂಡ. ದಾಸಿಯು ಒಂದು ತಟ್ಟೆಯಲ್ಲಿ ಊಟವನ್ನು ತಂದು “ಚಿಕ್ಕ ಬಾಬೂ, ಏಳಿ! ಊಟ ಮಾಡಿಕೊಳ್ಳಿ!” ಎಂದಳು.

ರಾಮನು ಗರ್ಜಿಸಿ ನುಡಿದ: ಸುಟ್ಟ ಮೋರೆಯವಳೇ, ಹೋಗು! ಇಲ್ಲಿಂದ ಈಕ್ಷಣ ಹೊರಟುಹೋಗು!

ನೃತ್ಯಕಾಳಿಯು ತಟ್ಟೆಯನ್ನು ಅಲ್ಲೇ ಇಟ್ಟು ಹೊರಟುಹೋದಳು. ರಾಮನು ತಟ್ಟೆಯನ್ನೆತ್ತಿ ಅಂಗಳಕ್ಕೆ ಎಸೆದನು.

ಬೆಳಗಾಗುತ್ತಲೇ ಶಾಮಲಾಲನು ಕೆಲಸಕ್ಕೆ ಹೊರಟುಹೋದನು. ನಂತರ ರಾಮನು ಅಂಗಳದಲ್ಲಿ ಓಡಾಡುತ್ತ, ಕೂಗಾಡತೊಡಗಿದ: ಆಣೆ-ಭಾಷೆಗಳನ್ನು ನಾನೇನೂ ಒಪ್ಪುವುದಿಲ್ಲ! ಬಹಳ ದೊಡ್ಡ ಆಣೆ-ಭಾಷೆ! ಹಾಕಿಕೊಳ್ಳುವುದಕ್ಕಾದರೂ ಅವರಾರು ? ಅವರು ನನ್ನ ಸ್ವಂತ ಅಣ್ಣನೇ? ಅವರು ನನಗೇನೂ ಆಗಬೇಕಾದ್ದಿಲ್ಲ. ನಾನವರ ಮಾತುಗಳನ್ನೂ ಕೇಳುವುದಿಲ್ಲ! ನಾನು ಅತ್ತಿಗೆಯನ್ನು ಹೊಡೆದೆನೇ? ಆ ಪಿಶಾಚಿ ಮುದುಕಿಯನ್ನು ಹೊಡೆಯಲು ಹೋದೆ— ಅದು ಅತ್ತಿಗೆಗ ತಾಕಿತು! ಇದರಲ್ಲಿ ನಾನು ಮಾಡಿದ ತಪ್ಪೇನು ? ಇದಕ್ಕಾಗಿ ಆಣೆ-ಭಾಷೆಗಳೇಕೆ ?

ಈ ಎಲ್ಲ ಮಾತುಗಳಿಗೆ ಯಾರೂ ಉತ್ತರ ಕೊಡಲಿಲ್ಲ. ತುಸ ಹೊತ್ತಿನ ನಂತರ ಅವನು ಧ್ವನಿಯನ್ನು ಬದಲಾಯಿಸಿ ಹೇಳಿದ; ಒಳ್ಳೆಯದು! ಒಳ್ಳೆಯದೇ ಆಯಿತು! ಯಾರೂ ಮಾತನಾಡಬೇಡಿ, ಊಟಕ್ಕಿಡಬೇಡಿ! ನಾನೇ ಆನಂದದಿಂದ ಅಡಿಗೆ ಮಾಡಿಕೊಂಡು,— ಅನ್ನ, ಸಾರು, ಪಲ್ಯ, ಒಳ್ಳೊಳ್ಳೆಯ ತರಕಾರಿ, ಮೀನು— ಎಲ್ಲವನ್ನೂ ಹೊಟ್ಟೆಯ ತುಂಬ ತಿನ್ನುವೆನು ನನಗೇನು ಕಡಿಮೆಯಾದದ್ದು ?

ಈ ಮಾತಿಗೂ ಯಾರೂ ಉತ್ತರ ಕೊಡಲಿಲ್ಲ. ಆಗ ಅವನು ಅಡಿಗೆಯ ಮನೆಗೆ ಹೋಗಿ, ಘಣ-ಘಣ, ಜಣ ಜಣ ಪಾತ್ರೆಗಳನ್ನು ಶಬ್ದ ಮಾಡುತ್ತ, ಲೋಟ, ತಂಬಿಗೆ, ಚಮಚಗಳನ್ನು ಅಲ್ಲಿಂದಿಲ್ಲಿ ಎತ್ತಿರಿಸುತ್ತ ಕೆಲಸ ಮಾಡತೊಡಗಿದ. ಜೋರಾಗಿ, ಎಲ್ಲರಿಗೂ ಕೇಳಿಸುವಂತೆ ಭೋಲನಿಗೆ ತರಕಾರಿ ಹಚ್ಚುವುದಕ್ಕೂ, ಅಕ್ಕಿ ತೊಳೆಯುವುದಕ್ಕೂ, ಅಜ್ಞೆಯಿತ್ತ. ನೃತ್ಯಕಾಳಿಯು ಅಡಿಗೆಯ ಮನೆಯಲ್ಲಿ ಎಲ್ಲಾ ಸಾಮಾನುಗಳನ್ನೂ ಇರಿಸಿ ಹೋಗಿದ್ದಳು. ಭೋಲನಿಗೆ ಆಜ್ಞೆ ಮಾಡಿದ: ಏ, ಭೋಲ! ನೀನು ನನ್ನ ನೌಕರ! ಆ ಕಡೆ ಹೋಗಕೂಡದು! ಆ ಮನೆಯವರು ಯಾರಾದರೂ ಈ ಕಡೆ ಬಂದರೆ ಕಾಲು ಮುರಿದುಹಾಕಿ ಬಿಡುವೆನು!— ತಿಳಿಯಿತೇ; ಭೋಲ? ನೃತ್ಯಕಾಳಿಯು ಈ ಕಡೆ ಬರಲಿ, ನೋಡೋಣ!

ನಾರಾಯಣಿಯು ಅಡಿಗೆಯ ಮನೆಯ ಅಂಗಳದಲ್ಲಿ ಕುಳಿತು, ಎಲ್ಲವನ್ನೂ ಕೇಳುತ್ತಿದ್ದಳು. ದಿಗಂಬರಿಯು ಒಮ್ಮೊಮ್ಮೆ ಅತ್ಯಂತ ಕುತೂಹಲದಿಂದ ಕಿಟಕಿಯ ಕಂಡಿಯಲ್ಲಿ ಆ ಕಡೆ ಇಣಿಕಿ ನೋಡುತ್ತಿದ್ದಳು. ಸ್ವಲ್ಪ ಹೊತ್ತಿನ ಬಳಿಕ ನಾರಾಯಣಿಯ ಬಳಿ ಬಂದು, ಉಕ್ಕಿ ಬರುತ್ತಿದ್ದ ನಗುವನ್ನು ತಡೆಯುತ್ತ ಪಿಸಪಿಸನೆ ಹೇಳಿದಳು: ಅಹಾ! ಹುಡುಗನ ಬುದ್ಧಿಯನ್ನು ನೋಡಿದೆಯಾ? ಹಿತ್ತಾಳೆಯ ತಪ್ಪಲೆಯಲ್ಲಿ ಕುತ್ತಿಗೆಯವರೆಗೆ ಅಕ್ಕಿ ಹಾಕಿಬಿಟ್ಟು, ಸ್ವಲ್ಪವೇ ನೀರು ಹಾಕಿ,—ಅನ್ನ ಮಾಡುತ್ತಿರುವವನು! ಊಟ ಮಾಡುವವನು ಒಬ್ಬ; ಹತ್ತು ಮಂದಿಗಾಗುವಷ್ಟು ಅಕ್ಕಿ ಹಾಕಿರುವನು! ಅಕ್ಕಿಯು ಬೇಯುವುದಾದರೂ ಹೇಗೆ? ಸುಟ್ಟು ಕರಿಯಾಗಿ ಹೋಗುವುದು! ಇಷ್ಟು ತಪ್ಪಲೆಯಲ್ಲಿ ಅಷ್ಟೊಂದು ಅಕ್ಕಿ ಬೇಯುವುದೇ?—ಇಷ್ಟಾದರೂ ಜಂಭ ಕೊಚ್ಚುತ್ತಿರುವನು; ಎಲ್ಲಾ ಮಾಡಿ ತಿನ್ನುವನಂತೆ; ಒಳ್ಳೊಳ್ಳೆಯ ತರಕಾರಿ ಮಾಡಿ ತಿನ್ನುವನಂತೆ! ನಾವೂ ಅಡಿಗೆ ಮಾಡುತ್ತೇವೆ—ಆದರೆ ಹೀಗೇ? ಅನ್ನಕ್ಕೆ ನೀರು ಒಂದು ಸಲ ಇಟ್ಟೆವೆಂದರೆ, ಪುನಃ ಅದನ್ನು ನೋಡಬೇಕಾಗಿ ಸಹ ಇಲ್ಲ! ಕಣ್ಣು ಮುಚ್ಚಿಕೊಂಡು ಇಳಿಸಿದರೂ ಸರಿಯಾಗಿ ಪಕ್ವವಾಗಿರುವುದು! ಯಾರು ಬೇಕಾದರೂ ಬರಲಿ, ನನ್ನ ಸಂಗಡ ಪಂಧ್ಯ ಕಟ್ಟಲಿ, ನೋಡೋಣ?

ನಾರಾಯಣಿಯು ಮುಖವನ್ನು ಬೇರೆ ಕಡೆ ತಿರುಗಿಸಿಕೊಂಡಳು.

ನೃತ್ಯಕಾಳಿಯು ಹತ್ತಿರವೇ ಕುಳಿತಿದ್ದಳು. ಅವಳೆಂದಳು: ಅಜ್ಜಿಯವರು ಅಷ್ಟು ಹೊತ್ತಿನಿಂದ ಒಂದೇ ಮಾತನ್ನು ಹೇಳುತ್ತಿರುವರು. ಚಿಕ್ಕ ಬಾಬು ಎಂದಾದರೊಂದು ದಿನ, ಒಂದು ಲೋಟ ನೀರನ್ನಾದರೂ ತಾವೇ ತೆಗೆದುಕೊಂಡು ಕುಡಿದಿದ್ದರಲ್ಲವೇ—ಈಗ ಅಡಿಗೆ ಮಾಡಿ, ಊಟ ಮಾಡುವುದಕ್ಕೆ?

ಅವಳು ಆ ಮನೆಯ ಅತ್ಯಂತ ಪುರಾತನ ದಾಸಿ ದಿಗಂಬರಿಯ ಈ ಮಾತುಗಳು ಅವಳಿಗೆ ಸರಿಹೋಗುತ್ತಲೇ ಇರಲಿಲ್ಲ

ತಾಯಿಯನ್ನು ನೋಡಿಕೊಂಡು ಸುರಧುನಿಯೂ ಒಮ್ಮೊಮ್ಮೆ ಆ ಕಡೆ ಇಣಿಕಿ ನೋಡುತ್ತಿದ್ದಳು. ಸುಮಾರು ಒಂದು ಗಂಟೆಯ ನಂತರ ಅವಳು ಓಡಿ ಬಂದು, ಅಕ್ಕನ ಕೈಹಿಡಿದೆಳೆದು "ಅಕ್ಕ, ಅಕ್ಕ! ಇಲ್ಲಿ ಸ್ವಲ್ಪ ಬಂದು ನೋಡು? ರಾಮುಲಾಲರು ಹಸಿ-ಹಸಿ ಅನ್ನವನ್ನೇ ತಿನ್ನುತ್ತಿರುವರು! ಸಾರು ಪಲ್ಯ, ತರಕಾರಿ ಏನೂ ಇಲ್ಲ—ಬರಿಯ ಅನ್ನ! ಅಕ್ಕ! ಹಸಿ-ಬಿಸಿ, ಅರ್ಧ ಬೆಂದ ಅನ್ನವನ್ನು ತಿಂದರೆ ಹೊಟ್ಟೆನೋವು ಬರುವುದಿಲ್ಲವೇ?

ನಾರಾಯಣಿಯು ಅವಳ ಕೈಯನ್ನು ಕೊಡಹಿ ದೂರಮಾಡಿದಳು. ನಂತರ ತನ್ನ ಹಾಸಿಗೆಯ ಮೇಲೆ ಹೋಗಿ ಮಲಗಿಕೊಂಡಳು. ಇಂದು ಅವನು ಎಷ್ಟು ಅಪಾರ ದುಃಖ ಮತ್ತು ಹಸಿವೆಗಳಿಂದ ಆ ಅನ್ನವನ್ನು ತಿನ್ನುತ್ತಿರಬಹುದು?—ಎಂಬ ವಿಷಯ ನಾರಾಯಣಿಗೆ ತಿಳಿಯದೆ ಇರಲಿಲ್ಲ.

ಮಧ್ಯಾಹ್ನ ಶಾಮುಲಾಲನ ಊಟವಾದ ಬಳಿಕ, ದಿಗಂಬರಿಯು ನಾರಾಯಣಿಯನ್ನು ಊಟಕ್ಕೆಬ್ಬಿಸಲು ಯತ್ನಿಸಿದಳು. "ಏಳು, ನಾರಾಯಣಿ! ಒಂದೆರಡು ತುತ್ತು ಊಟ ಮಾಡು! ಜ್ವರವೇನೂ ಇಲ್ಲ; ಏಟು ತಾಕಿದ್ದರಿಂದ ಸ್ವಲ್ಪ ಆಯಾಸವಾಗಿದೆ; ಅಷ್ಟೆ! ಊಟ ಮಾಡುವುದರಿಂದ ಏನೂ ತೊಂದರೆಯಾಗುವುದಿಲ್ಲ! ಏಳು!" ಎಂದಳು.

ನಾರಾಯಣಿಯು ಮುಸುಕನ್ನು ಮತ್ತಷ್ಟು ಎಳೆದು ಹೊದ್ದುಕೊಂಡು "ಅಮ್ಮ! ನನಗೆ ಬೇಜಾರು ಮಾಡಬೇಡ! ನೀವುಗಳೆಲ್ಲ ಊಟ ಮಾಡಿ, ಕೆಲಸ ಮುಗಿಸಿಕೊಳ್ಳಿ!"

"ಮತ್ತೇನೂ ಹೆಚ್ಚಿಗೆ ತಿನ್ನದಿದ್ದರೆ ಬೇಡ! ಒಂದೇ ಒಂದು ರೊಟ್ಟಿ, ಸ್ವಲ್ಪ ಪಡವಲಕಾಯಿ ಪಲ್ಯವನ್ನು ತಿನ್ನು! ಏಳು............!—" ಎಂದಳು ದಿಗಂಬರಿ.

"ಇಲ್ಲ; ನಾನೇನೂ ತಿನ್ನುವುದಿಲ್ಲ!"

"ಇದೇಕೆ ಹೀಗೆ ಮಾಡುವೆ? ನಿನ್ನೆಯೆಲ್ಲಾ ಉಪವಾಸ ಮಾಡಿರುವೆ; ಈ ದಿನವೂ ಊಟ ಮಾಡದಿದ್ದರೆ, ಶರೀರವೇನಾಗಬೇಕು?"

ನಾರಾಯಣಿಯು ಏನೂ ಉತ್ತರ ಕೊಡಲಿಲ್ಲ. ಅಷ್ಟರಲ್ಲಿ ನೃತ್ಯ ಕಾಳಿಯು ನುಡಿದಳು: ನೀವೇಕೆ ಸುಮ್ಮ-ಸುಮ್ಮನೆ ಅವರನ್ನು ಬಲಾತ್ಕಾರ ಮಾಡುವಿರಿ? ತಲೆ-ಕೆಳಗಾಗಿ ನಿಂತು, ಸಂಜೆಯುವರೆಗೂ ಕೂಗಿಕೊಂಡರೂ ಅವರು ಊಟ ಮಾಡುವುದಿಲ್ಲ! ಇನ್ನೂ ಸ್ವಲ್ಪ ಜ್ವರವಿದೆ; ಚೆನ್ನಾಗಿ ನಿದ್ದೆ ಮಾಡಲಿ, ಸುಮ್ಮನಿರಿ.

ದಿಗಂಬರಿಯು ಎದ್ದು ಹೊರಟು ಹೋದಳು. ಹೋಗ-ಹೋಗುತ್ತ ಎಡಬಡಿಸಿಕೊಂಡಳು: ಇದೇನು ವಿಚಿತ್ರವೆಂಬುದನ್ನು ಆ ಭಗವಂತನೇ ಬಲ್ಲ! ಏಟು ತಾಕಿದ್ದರಿಂದ ಸ್ವಲ್ಪ ಆಯಾಸವಾದ ಮಾತ್ರಕ್ಕೆ ಊಟವನ್ನೇ ಬಿಟ್ಟುಬಿಡುವುದೇ? ಇದೆಲ್ಲ ನಮ್ಮಿಂದ ಸಾಧ್ಯವಿಲ್ಲ!

ಸಾಯಂಕಾಲ ನಾರಾಯಣಿಯು ಪುನಃ ಅಡಿಗೆಯ ಮನೆ ಅಂಗಳದಲ್ಲಿ ಬಂದು ಕುಳಿತಳು. ನೃತ್ಯಕಾಳಿಯ ಕಣ್ಣುಗಳೂ ತನ್ನ ಕಣ್ಣುಗಳೂ ಕೂಡಿದಾಗಲೆಲ್ಲ ಏನೋ ಹೇಳಬೇಕೆಂದು ಬಾಯಿ ತೆಗೆದಳು; ಆದರೆ ಹೇಳದೆಯೇ ಸುಮ್ಮನಿದ್ದು ಬಿಟ್ಟಳು.

ರಾಮನು ಶಾಲೆಯಿಂದ ಹಿಂತಿರುಗಿ ಕೈಕಾಲು-ಮುಖ ತೊಳೆದುಕೊಂಡ ನಂತರ ಅಂಗಡಿಗೆ ಹೋಗಿ ಕಡಲೆ-ಪುರಿ ಕೊಂಡು ತಂದ. ಅದನ್ನು ತಿನ್ನುತ್ತ ಉಚ್ಚ ಸ್ವರದಿಂದ ಹೇಳಿದ: ನನಗೇನು ಕಡಿಮೆಯಾದದ್ದು? ಅನ್ನ ತಿಂದು ಸಂತೋಷದಿಂದ ಶಾಲೆಗೆ ಹೋದೆ. ಈಗ ಮನೆಗೆ ಬಂದು ಪುನಃ ತಿನ್ನುತ್ತಿರುವೆನು!

ಬೇಲಿಯ ಆ ಕಡೆ ಆ ಮನೆಯುವರಾದರೂ ಇರುವರೆಂಬುದನ್ನು ಅವನು ತಿಳಿದುಕೊಂಡಿದ್ದ. ಆದರೆ ಬೆಳಗಿನಂತೆಯೇ, ಈಗಲೂ ಯಾರೂ ಉತ್ತರ ಕೊಡಲಿಲ್ಲ. ಇದರಿಂದ ಅವನಿಗೆ ಗಾಬರಿಯಾಯಿತು. ಮತ್ತೊಮ್ಮೆ ಗಟ್ಟಿಯಾಗಿ ಕಿರಿಚಿ ಹೇಳಿದ: ನಮ್ಮ ಮನೆಯ ಕಡೆಗೆ ಯಾರಾದರೂ ಬರಲಿ, ನೋಡೋಣ! ನೃತ್ಯಕಾಳಿಯು ಬರಲಿ ಅವಳ ಕಾಲು ಮುರಿದುಬಿಡುವೆನು!

ಈ ಕಾಲು ಮುರಿಯುವ ಮಾತನ್ನು ಮೊದಲೂ ಒಂದು ಬಾರಿ ಅವನು ಹೇಳಿದ್ದ. ಆ ಬಾರಿ ಅದರ ಪರಿಣಾಮವೇನೂ ಆಗದಿದ್ದಂತೆ ಈ ಬಾರಿಯೂ ಆಗಲಿಲ್ಲ. ಸಾಯಂಕಾಲವಾದ ಬಳಿಕ, ದೀಪವನ್ನು ಹೊತ್ತಿಸಿ, ಅಡಿಗೆಯ ಮನೆಗೆ ಹೋಗಿ, ಕೂಗಾಡತೊಡಗಿದ: ನಮ್ಮ ಸೌದೆ ಎಲ್ಲಿ? ನಾನು ಹೇಗೆ ಅಡಿಗೆ ಮಾಡಲಿ? ನಮ್ಮ ಅರೆಯುವ ಕಲ್ಲು-ಗುಂಡುಕಲ್ಲು ಎಲ್ಲಿ? ನಾನು ಮಸಾಲೆ ಹೇಗೆ ಅರೆಯಲಿ?

ಆ ಮನೆಯಂದ ದಾಸಿಯು ಹೇಳಿದರು: ನಾಳೆ ಅಂಗಡಿಯಿಂದ ತಂಸಿ ಕೊಡುತ್ತಾರಂತೆ! ಬಹೂಜೀಯವರು ಹೇಳಿದರು.

"ಬೇಡ! ನನಗೆ ಅಂಗಡಿಯಿಂದ ಕೊಂಡ ಕಲ್ಲು-ಗುಂಡುಕಲ್ಲುಗಳು ಬೇಡ!" ಎಂದು ಅಳುತ್ತ, ಅಡಿಗೆಯ ಮನೆಯಿಂದ ಹೊರಟುಹೋದ.

ಸ್ವಲ್ಪ ಹೊತ್ತಿನ ನಂತರ ಪುನಃ ಬಂದು, ಹೇಳತೊಡಗಿದ: ನನ್ನ 'ಗಣೇಶ' ಮೀನನ್ನು ಏಕೆ ಹಿಡಿಸಿದಳು? ಮುದುಕಿಯು ಏನೇನೋ ಮಾತುಗಳನ್ನಾಡಿ ನನ್ನನ್ನೇಕೆ ರೇಗಿಸಿದಳು? ಅವಳನ್ನು ಇನ್ನೂ ಬೈಯುವೆನು. ಬೇಕಾದಷ್ಟು ಬೈಯುವೆನು!—ಮುದುಕಿಯು ಸತ್ತು, ಮುಂದಿನ ಜನ್ಮಕ್ಕೆ ಪಿಶಾಚಿಯಾಗುವಳು!

ದಿಗಂಬರಿಯು ಕಣ್ಣುಗಳನ್ನು ಕೆರಳಿಸಿಕೊಂಡು: "ಕೇಳಿದೆಯಾ, ನಾರಾಯಣೀ! ಕೇಳಿದೆಯಾ? ಇದು ಕಾಲು ಕೆರೆದುಕೊಂಡು ಜಗಳಕ್ಕೆ ಬರುವುದಲ್ಲದೆ ಮತ್ತೇನು?

ನಾರಾಯಣಿಯು ಕೇಳಿಸಿಯೂ ಕೇಳಿಸದವಳಂತೆ ಬೇರೆ ಕಡೆ ನೋಡುತ್ತಿದ್ದಳು; ಏನೂ ಉತ್ತರ ಕೊಡಲಿಲ್ಲ.

---

೫

ಮರುದಿನ ರಾಮನ ಮಾತು-ಕತೆಗಳ ರೀತಿಯೇ ಬದಲಾಯಿಸಿತು. ಎರಡು ದಿನಗಳಾದರೂ ಅತ್ತಿಗೆಯು ಅವನನ್ನು ಕರೆಯಲಿಲ್ಲ, ಗದರಿಸಲಿಲ್ಲ — ಬೈಯಲಿಲ್ಲ, ಹೊಡೆಯಲಿಲ್ಲ; ಊಟವನ್ನೂ ಮಾಡಿಸಲಿಲ್ಲ! ಅವಳು ಈ

ರೀತಿ ಸುಮ್ಮನಿದ್ದುದನ್ನು ಅವನು ತನ್ನ ಜೀವಮಾನದಲ್ಲೆಂದೂ ನೋಡಿರಲಿಲ್ಲ. ಇಂದು ಅವನಿಗೆ ವಾಸ್ತವವಾಗಿಯೂ ಹೆದರಿಕೆಯುಂಟಾಯಿತು ಮೊದಲು ಅವನು ಅಡಿಗೆ ಮನೆಯ ಅಂಗಳದಲ್ಲಿ ಕುಳಿತು ಏನೇನೋ ಮಾತನಾಡಿಕೊಂಡ. "ಬೆಕ್ಕನ್ನು ಹೊಡೆಯಬೇಕೆಂದು ಸೀಬೆಯಕಾಯಿ ಎಸೆದೆ" ಎಂದ ಒಮ್ಮೆ. ಪುನಃ ಹೇಳಿದ: ಕೈಯಿಂದ ತಪ್ಪಿ ಅತ್ತಿಗೆಯ ಹಣೆಗೆ ತಾಕಿತು—ಎಂದು. "ನಾನು ಸೀಬೆಯ ಕಾಯನ್ನು ತಿನ್ನುತ್ತ ಕುಳಿತಿದ್ದೆ. ಯಾರನ್ನೂ ಹೊಡೆಯಲಿಲ್ಲ!" ಎಂದ ಮತ್ತೊಮ್ಮೆ. ನಾನು ಯಾರನ್ನೂ ಬೈಯಲಿಲ್ಲ!" ಎಂದ ಮಗದೊಮ್ಮೆ. ಅವನ ಇಷ್ಟೆಲ್ಲ ಮಾತುಗಳಲ್ಲಿ ಯಾವುದೂ ಫಲಕಾರಿಯಾಗಲಿಲ್ಲ. ಆ ಮನೆಯವರು ಯಾರೂ ಉತ್ತರ ಕೊಡಲಿಲ್ಲ; ಹೌದು-ಅಲ್ಲ ಎಂದು ಸಹ ಹೇಳಲಿಲ್ಲ. ಕಡೆಗೆ ಲಜ್ಜೆ-ಸಂಕೋಚಗಳನ್ನೆಲ್ಲ ದೂರಮಾಡಿ, ಒಮ್ಮೆ 'ಇನ್ನು ಮಾಡುವುದಿಲ್ಲ, ಅತ್ತಿಗೆ!' ಎಂದ ಆ ವಾಕ್ಯವೂ ಫಲಕಾರಿಯಾಗದ್ದನ್ನು ಕಂಡು, ಕಡೆಗೆ ಅಳತೊಡಗಿದ. ಇನ್ನು ಅವನು ಯಾವ ಉಪಾಯದಿಂದ, ಯಾವ ವಸ್ತುವಿನಿಂದ ಅತ್ತಿಗೆಯನ್ನು ಸಂತೋಷಗೊಳಿಸಬಲ್ಲ! ಅತ್ತಿಗೆಯು ಅವನನ್ನು ಬೇರೆ ಇರಿಸಿಬಿಟ್ಟಳು— ಈಗವನು ಊಟಮಾಡುವುದೆಲ್ಲಿ? ಯಾರ ಹತ್ತಿರ ಇರುವನು, ಹೇಗಿರುವನು? ಅವನಿಗೆ ಎಲ್ಲಾ ವಿಧದಿಂದಲೂ ದಿಕ್ಕು ತೋಚದಂತಾಯಿತು. ಇಂದು ಅವನು ಅಡಿಗೆ ಮಾಡುವ ಪ್ರಯತ್ನವನ್ನೂ ಮಾಡಲಿಲ್ಲ. ಶಾಲೆಗೂ ಹೋಗಲಿಲ್ಲ; ಕೊಠಡಿಯಲ್ಲಿ ಹೋಗಿ ಸುಮ್ಮನೆ ಮಲಗಿಕೊಂಡ.

ಯಾರಿಗೂ ಕಾಣದಂತೆ-ಮರೆಯಲ್ಲಿ-ಅತ್ತು ಅತ್ತು ಸಾಕಾಗಿದ್ದರಿಂ ನಿನ್ನೆ ರಾತ್ರಿ ನಾರಾಯಣಿಗೆ ಜ್ವರವೇರಿ ಬಂದಿತ್ತು, ಮಧ್ಯಾಹ್ನ ದಿಗಂಬರಿಯು ಒಂದು ಲೋಟ ಹಾಲನ್ನು ತೆಗೆದುಕೊಂಡು ಬಂದು "ನೀನು ಇದನ್ನಾದರೂ ಕುಡಿಯಲೇಬೇಕು. ಏನೂ ತಿನ್ನದೆ ಉಣ್ಣದೆ ಪ್ರಾಣ ಬಿಡುವೆಯಾ?" ಎಂದಳು. ನಾರಾಯಣಿಯು ಬೇಡವೆನ್ನಲಿಲ್ಲ. ಲೋಟವನ್ನು ಕೈಗೆ ತೆಗೆದುಕೊಂಡು, ಸ್ವಲ್ಪ ಹಾಲನ್ನು ಕುಡಿದು ಹಾಗೆಯೇ ಕೆಳಗಿಟ್ಟಳು; ನಂತರ ಮತ್ತೊಂದು ಪಕ್ಕಕ್ಕೆ ತಿರುಗಿ ಮಲಗಿಕೊಂಡಳು. ಅವಳಿಗೆ ಪ್ರತಿಸಲವೂ 'ಬೇಡ, ಬೇಡ' ಎನ್ನುವುದಕ್ಕೆ ಸಹ ಬೇಸರವೆನ್ನಿಸಿತು.

ರಾತ್ರಿ ಒಂಭತ್ತು ಗಂಟೆಯ ಸಮಯ. ನೃತ್ಯಕಾಳಿಯು ಬಂದು

ಮೆಲ್ಲನೆ ಹೇಳಿದಳು! ಬಹೂಜೀ! ಚಿಕ್ಕ ಬಾಬುಗಳ ಶಬ್ದವೇ ಇಲ್ಲವಲ್ಲ—ಇಷ್ಟು ರಾತ್ರಿಯಾಯಿತು ?

ನಾರಾಯಣಿಯು ಗಾಬರಿಯಿಂದ ಎದ್ದು ಕುಳಿತು ; ಅವಳ ನಯನಗಳಿಂದ ಪಟಪಟನೆ ಅಶ್ರುಬಿಂದುಗಳುದುರಿದುವು. ಅಳುತ್ತ ಹೇಳಿದಳು : ಹೋಗು ನಿಕ್ಸೊ ! ಮನೆಯಲ್ಲಿರುವನೇ ಇಲ್ಲವೇ ನೋಡಿ ಬಾ !

ನೃತ್ಯಕಾಳಿಯ ಕಣ್ಣಾಲಿಗಳೂ ನೀರಿನಲ್ಲಿ ತೇಲತೊಡಗಿದುವು. ಕಣ್ಣುಗಳನ್ನು ಒರೆಸಿಕೊಳ್ಳುತ್ತ ಹೇಳಿದಳು : ಹೋಗುವ್ವದಕ್ಕೆ ಧೈರ್ಯವೇ ಬರುವದಿಲ್ಲ, ಬಹೂಜೀ !—ಎನ್ನುತ್ತ ಹೊರಕ್ಕೆ ಹೋಗಿ, ಭೋಲನನ್ನು ಕರೆತಂದಳು. ಚಿಕ್ಕಬಾಬು ಮನೆಯಲ್ಲಿರುವರೆಂದೂ, ಮಲಗಿರುವರೆಂದೂ ಭೋಲನು ಸಮಾಚಾರ ತಿಳಿಸಿದ. ನಾರಾಯಣಿಯು ಎರಡೂ ಕೈಗಳನ್ನು ಜೋಡಿಸಿ ತಲೆಯ ಮೇಲಿಟ್ಟುಕೊಂಡು, ಮುಸುಕು ಹೊದ್ದುಕೊಂಡು ಪುನಃ ಮಲಗಿದಳು.

ಮರುದಿನ ಬೆಳಗಿನ ಜಾವ, ಇನ್ನೂ ಕತ್ತಲಿರುವಾಗಲೇ ಎದ್ದು, ಸ್ನಾನ ಮಾಡಿ ಅಡಿಗೆಗಿರಿಸಿಳು. ಅರ್ಧ ಅಡಿಗೆಯಾಗುತ್ತಿದ್ದ ಹೊತ್ತಿಗೆ ದಿಗಂಬರಿಯು ಎಚ್ಚತ್ತಳು. ಮಗಳ ಈ ಕಾರ್ಯವನ್ನು ನೋಡಿ ಆಶ್ಚರ್ಯಚಕಿತಳಾದಳು. “ ನಿನ್ನೆಯೆಲ್ಲಾ ನಿನಗೆ ಜ್ವರ ಬಂದಿರಲಿಲ್ಲವೇ, ನಾರಾಯಣೀ ? ಮೂರು ದಿನಗಳಿಂದ ನೀನು ಏನೂ ತಿಂದಿಲ್ಲ-ಉಂಡಿಲ್ಲ ! ಈ ದಿನ ಇಷ್ಟು ಮುಂಚಿತವಾಗಿ—ಕತ್ತಲಿರುವಾಗಲೇ, ಎದ್ದು, ಇದೇನು ಮಾಡುತ್ತಿರುವೆ? ” ಎಂದು ಕರ್ಕಶ ಧ್ವನಿಯಿಂದ ಪ್ರಶ್ನಿಸಿದಳು.

ನಾರಾಯಣಿಯು ಅವಳ ಸ್ವಾಭಾವಿಕ ಸರಳತೆಯಿಂದ ಉತ್ತರವಿತ್ತಳು: ನೋಡುತ್ತಿರುವೆಯಲ್ಲ, ಅಡಿಗೆ ಮಾಡುತ್ತಿರುವೆನು ?

“ ನೋಡುತ್ತಿರುವುದೇನೋ ಸರಿ ! ಆದರೆ ಏಕೆ ಎಂಬುದನ್ನಾದರೂ ಹೇಳು, ಕೇಳುವೆನು ! ಇನ್ನು ಮೇಲೆ ನನ್ನ ಕೈ–ಅಡಿಗೆಯನ್ನು ನೀನು ಊಟ ಮಾಡುವುದಿಲ್ಲವೇ ? ”

ನಾರಾಯಣಿಯು ಏನೂ ಉತ್ತರ ಕೊಡಲಿಲ್ಲ. ತನ್ನ ಕೆಲಸದಲ್ಲಿ ತೊಡಗಿದಳು.

‘ ಅತ್ತಿಗೆಗೆ ಎಷ್ಟು ಏಟು ತಗುಲಿರಬಹುದು ’ ಎಂಬುದನ್ನೇ ರಾಮನು ನಿನ್ನೆಯೆಲ್ಲಾ ಯೋಚಿಸುತ್ತಿದ್ದ. ಒಂದು ಸೀಬೆಯ ಕಾಯನ್ನು ತಂದು,

ಅದನ್ನು ತನ್ನ ಕಪಾಳದ ಮೇಲೆ ಹೊಡೆ-ಹೊಡೆದುಕೊಂಡು, ಅತ್ತಿಗೆಗೆ ತನ್ನಿಂದಾದ ಪೆಟ್ಟಿನ ಗುರುತ್ವವನ್ನು ತಿಳಿದುಕೊಳ್ಳಲು ಪ್ರಯತ್ನಿಸಿದ. ನಂತರ ' ಈ ಕುಕರ್ಮಕ್ಕೆ ತಕ್ಕ ಪ್ರಾಯಶ್ಚಿತ್ತವಾದರೂ ಏನು ? ' ಎಂಬುದನ್ನು ಯೋಚಿಸತೊಡಗಿದ. ಯೋಚಿಸಿದ್ದಂತೆಯೇ ಅವನಿಗೆ—ಅತ್ತಿಗೆಯು ಕೆಲವು ದಿನಗಳ ಹಿಂದೆ ನೀನು ಇಲ್ಲಿರಬೇಡವೆಂದು ಹೇಳಿದ್ದು—ಜ್ಞಾಪಕ ಬಂದಿತು. ಆದ್ದರಿಂದ, ತಾನು ಬೇರೆ ಎಲ್ಲಿಯಾದರೂ ಹೊರಟು ಹೋದರೆ ಅತ್ತಿಗೆಯು ಸಂತೋಷದಿಂದರಬಹುದೆಂದು ಅವನು ನಿರ್ಧರಿಸಿಕೊಂಡ. ಅವನ ಅಜ್ಜಿ (ತಾಯಿಯ ತಾಯಿ) ಯ ಮನೆ ತಾರಕೇಶ್ವರದಿಂದ ತುಸು ದೂರದಲ್ಲಿತ್ತು ; ಆದರೆ ಅದು ಸರಿಯಾಗಿ ಎಲ್ಲಿದೆ ಎಂಬುದು ಅವನಿಗೆ ಗೊತ್ತಿರಲಿಲ್ಲ. ಅಲ್ಲಿಗೇ ಹೋಗಿ, ನಂತರ ಹುಡುಕಿಕೊಳ್ಳುವುದು— ಎಂದು ಸಂಕಲ್ಪಿಸಿ, ಒಂದು ಸಣ್ಣ ಮೂಟೆಯನ್ನು ಕಟ್ಟಿಸಿಕೊಂಡು, ಬೆಳಗಾಗುವುದನ್ನೇ ಇದಿರು ನೋಡುತ್ತಿದ್ದನು.

ಅಡಿಗೆಯೆಲ್ಲ ಪೂರ್ತಿಯಾಗಿ ಮುಗಿದ ಮೇಲೆ, ನಾರಾಯಣಿಯು ಒಂದು ತಟ್ಟೆಯಲ್ಲಿ ಎಲ್ಲವನ್ನೂ ಅಚ್ಚುಕಟ್ಟಾಗಿ ಬಡಿಸುತ್ತಿದ್ದಳು. ಅಷ್ಟರಲ್ಲಿ ಬಾಗಿಲ ಬಳಿ ಭೋಲನು ಬಂದು " ಅಮ್ಮಾ ! " ಎಂದು ಕೂಗಿದ.

ನಾರಾಯಣಿಯು ತಿರುಗಿ ನೋಡಿದಳು. " ಏನು ಭೋಲ " ಎಂದು ಕೇಳಿದಳು

ಹಿಂದಿನಿಂದಲೂ ಅವನು ಆ ಮನೆಯ ಹಸು-ಕರುಗಳನ್ನು ನೋಡಿಕೊಳ್ಳುತ್ತಿದ್ದ, ಈಗ ರಾಮನ ಹೆದರಿಕೆಯಿಂದ ಅವನು ಒಳಕ್ಕೆ ಬರಲಿಲ್ಲ. ಮೆಲ್ಲನೆ ನುಡಿದ : ಕಿವಿಯಲ್ಲಿ ಒಂದು ಮಾತು ಹೇಳಬೇಕಾಗಿದೆ, ಅಮ್ಮಾ !

ನಾರಾಯಣಿಯು ಹತ್ತಿರ ಬರುತ್ತಲೇ ಪಿಸಪಿಸನೆ ಹೇಳಿದ : ಎರಡು ರೂಪಾಯಿಗಳನ್ನು ಕೊಟ್ಟುಬಿಟ್ಟರೆ, ನೀವು ಹೇಳಿದಂತೆಯೇ ಆಗುವುದಮ್ಮಾ !

ನಾರಾಯಣಿಗೆ ಏನೂ ಅರ್ಥವಾಗಲಿಲ್ಲ; ಅವಳೆಂದಳು : ಏನಾಗುವುದೋ ? ಯಾರಿಗೆ ರೂಪಾಯಿ ಕೊಡಬೇಕೋ ?

ಭೋಲನಿಗೆ ಆಶ್ಚರ್ಯವಾಯಿತು. ಅವನೆಂದ : ಚಿಕ್ಕ ಬಾಬುಗಳಿಗೆ ನೀವು ಇಲ್ಲಿರಬೇಡ, ಹೊರಟು ಹೋಗೆಂದು ಹೇಳಿರಲಿಲ್ಲವೇ ? ಅದೋ ! ಅವರು ಹೊರಡಲು ಸಿದ್ಧವಾಗಿರುವರು.. ಹೋಗಲಿ—ಎರಡು ರೂಪಾಯಿಗಳಿಲ್ಲದಿದ್ದರೆ ಒಂದು ರೂಪಾಯನ್ನಾದರೂ ಕೊಡಿ !

ನಾರಾಯಣಿಯು ಚಕಿತಳಾಗಿ, ವ್ಯಾಕುಲದಿಂದ ಕೇಳಿದಳು: ಎಲ್ಲಿಗೆ ಹೋಗಲು ಸಿದ್ಧನಾಗಿರುವನು? ಈಗ ಅವನೆಲ್ಲಿರುವನು?

"ಹೊರಗಡೆ ಅರಳಿಯ ಮರದ ಹತ್ತಿರ ನಿಂತಿರುವರು."

"ಹೋಗು ಭೋಲ, ಜಾಗ್ರತೆ ಹೋಗು!— ನಾನು ಕರೆದೆನೆಂದು ಹೇಳಿ, ಕರೆದುಕೊಂಡು ಬಾ!"

ಭೋಲನು ಜಾಗ್ರತೆಯಾಗಿ ಓಡಿಹೋದ. ನಾರಾಯಣಿಯು ಶಿಲೆಯ ಮೂರ್ತಿಯಂತೆ ಸ್ತಂಭಿತಳಾಗಿ ಅಲ್ಲೇ ನಿಂತಿದ್ದಳು. ಸ್ವಲ್ಪ ಹೊತ್ತಿನಲ್ಲೇ ರಾಮನು ಕೈಯಲ್ಲೊಂದು ಪುಟ್ಟ ಮೂಟೆಯನ್ನು ಹಿಡಿದುಕೊಂಡು, ಎದುರಿಗೆ ಬಂದು ನಿಂತನು. ನಾರಾಯಣಿಯು ಏನೂ ಮಾತನಾಡದೆ, ಅವನನ್ನು ಕೈ ಹಿಡಿದು ಒಳಗೆ ಕರೆದುಕೊಂಡು ಹೋದಳು.

ದೂರದಿಂದಲೇ ದಿಗಂಬರಿಯು ರಾಮನು ಅಡಿಗೆಯ ಮನೆಗೆ ಹೋಗುತ್ತಿರುವದನ್ನು ಕಂಡಳು. ಅವಳಿಗೆ ನಿಜವಾಗಿಯೂ ಪ್ರಾಣ ಹಾರಿಹೋದಂತಾಯಿತು. ಕುತೂಹಲದಿಂದ ಅವಳು ಓಡಿ ಓಡಿ ಅಡಿಗೆಯ ಮನೆಗೆ ಹೋದಳು. ಅಲ್ಲಿ ನೋಡಲಾಗಿ, ಅಚ್ಚುಕಟ್ಟಾಗಿ ಬಡಿಸಿದ್ದ ತಟ್ಟೆಯ ಮುಂದೆ ನಾರಾಯಣಿಯು ರಾಮನನ್ನು ಮಡಿಲ ಮೇಲೆ ಕುಳ್ಳಿರಿಸಿಕೊಂಡು ಕುಳಿತಿದ್ದಳು. ರಾಮನು ಅವಳ ಹೃದಯದಲ್ಲಿ ತನ್ನ ಮುಖವನ್ನು ಮರೆಸಿಕೊಂಡಿದ್ದ. ನಾರಾಯಣಿಯ ನೇತ್ರಗಳಿಂದ ಅವನ ತಲೆ ಮತ್ತು ಬೆನ್ನುಗಳ ಮೇಲೆ ಪಟಪಟನೆ ಅಶ್ರುಬಿಂದುಗಳುದುರುತ್ತಿದ್ದುವು.

ದಿಗಂಬರಿಯು ಚಕಿತಳಾಗಿ ತುಸು ಹೊತ್ತು ನೋಡುತ್ತ ನಿಂತಿದ್ದಳು ನಂತರ ಹೇಳಿದಳು: ಇದಕ್ಕೋಸ್ಕರವೇ ಅಷ್ಟು ಮುಂಜಾನೆ ಎದ್ದು ಅಡಿಗೆ ತಯಾರಾಗುತ್ತಿತ್ತೆಂದು ನನಗೇನು ಗೊತ್ತು? ಊಟ ಮಾಡಿಸುವಂತೆ ತೋರುತ್ತದೆ!— ಅಳಿಯನವರು ಅಂದು ಅಷ್ಟು ಕಡುತರವಾದ ಆಣೆ-ಭಾಷೆಗಳನ್ನು ಇಟ್ಟುಕೊಂಡದ್ದು ಹಾಳಾಗಿ ಹೋಯಿತೇ?

ನಾರಾಯಣಿಯು ತಲೆಯೆತ್ತಿ ಹೇಳಿದಳು: ಹಾಳಾಗಿ ಹೋಗುವುದೇಕೆ, ಅಮ್ಮ? ಅವರ ಮಾತನ್ನು ನಾನು ಅಮಾನ್ಯ ಮಾಡಿದೆನೇ? ಇಲ್ಲ! ಮೂರು ದಿನಗಳಿಂದ ನಾನೂ ಊಟ ಮಾಡಲಿಲ್ಲ; ಇವನಿಗೂ ಮಾಡಿಸಲಿಲ್ಲ!

ದಿಗಂಬರಿಯು ತೀಕ್ಷ್ಣಸ್ವರದಿಂದ ನುಡಿದಳು: ಇಷ್ಟು ಮಾತ್ರಕ್ಕೆ, ಅವರ ಮಾತನ್ನು ಅಮಾನ್ಯ ಮಾಡಲಿಲ್ಲವೆಂದು ಹೇಳುವೆಯಾ? ಈಗ ನೀನು

ಮಾಡುತ್ತಿರುವುದಾದರೂ ಏನು? ಆಣೆ-ಭಾಷೆ ಹಾಕಿಕೊಂಡವರನ್ನು ಒಮ್ಮೆ ಕೇಳಿ ಮಾಡಬಾರದಿತ್ತೇ?

ತಾಯಿಯ ಈ ಆಘಾತ-ವಾಕ್ಯಗಳನ್ನು ಸಹಿಸಿಕೊಳ್ಳುತ್ತ, ಸಂಕ್ಷೇಪ ದಿಂದ ನುಡಿದಳು ನಾರಾಯಣಿ: ನಾನು ಕೇಳಿರುವೆನು.

ದಿಗಂಬರಿಗೆ ನಂಬಿಕೆಯುಂಟಾಗಲಿಲ್ಲ. ಮತ್ತಷ್ಟು ಕ್ರೋಧಿತಳಾಗಿ ನುಡಿದಳು: ನಾನಿನ್ನೂ ಹಾಲು ಕುಡಿಯುವ ಪುಟ್ಟ ಮಗುವಲ್ಲ, ನಾರಾಯಣಿ! ನೀನು ಕೇಳಿದ್ದಿದ್ದರೆ ನನಗೆ ಗೊತ್ತಾಗುತ್ತಿರಲಿಲ್ಲವೇ?

ಇನ್ನು ನಾರಾಯಣಿಗೆ ಸಹಿಸಲಾಗಲಿಲ್ಲ. ಅವಳೂ ಕಠೋರತೆಯಿಂದ ನುಡಿದಳು: ನಾನು ಯಾವಾಗ, ಯಾರನ್ನು ಹೇಗೆ ಕೇಳಿದೆನೆಂಬುದು ನಿನಗೆ ಹೇಗೆ ಗೊತ್ತಾದೀತಮ್ಮಾ? ಬಾಯಿ-ಮಾತು ತಿಳಿದಿರುವವರು ಬೇಕಾದಷ್ಟು ಆಣೆ-ಭಾಷೆಗಳನ್ನು ಹಾಕಿಕೊಳ್ಳಬಹುದು; ಆದರೆ, ಅಮ್ಮಾ!— ಎಂದು ಅಷ್ಟಕ್ಕೇ ಮಾತನ್ನು ನಿಲ್ಲಿಸಿ ಮತ್ತು ಅತ್ಯಂತ ಪ್ರೀತಿಯಿಂದ ರಾಮನ ಲಜ್ಜಿತ ಮುಖವನ್ನು ತನ್ನ ಹೃದಯದಿಂದ ಮೇಲೆತ್ತಿ, ಹಣೆಯನ್ನು ಮುದ್ದಿಟ್ಟು ನುಡಿದಳು: ಆದರೆ ಅಮ್ಮಾ! ಆದರದಿಂದ ಹೃದಯಕ್ಕಪ್ಪಿಕೊಂಡು, ಪ್ರೀತಿ ಯಿಂದ ಸಲಹಿ, ಪುಟ್ಟ ಮಗುವಿನಿಂದ ಇಷ್ಟು ದೊಡ್ಡವನನ್ನಾಗಿ ಮಾಡಿದ ಜವಾಬ್ದಾರಿಯು ಯಾರದೋ ಅವರಿಗೆ ಗೊತ್ತು ಅಮ್ಮಾ— ಹೇಗೆ ಕೇಳಬೇಕು; ಯಾವ ರೀತಿ ಅನುಮತಿ ದೊರಕುವುದು ಎಂಬುದು! ನೀನು ಆ ವಿಷಯವಾಗಿ ಚಿಂತಿಸಬೇಕಾದ ಆವಶ್ಯಕತೆ ಇಲ್ಲ, ಅಮ್ಮ! ಸದ್ಯಕ್ಕೆ ನೀನು ಸ್ವಲ್ಪ ಆಚೆ ಹೋಗು; ಒಂದೆರಡು ತುತ್ತನ್ನಾದರೂ ಮಗುವಿಗೆ ತಿನ್ನಿಸುವೆನು. ಮೂರು ದಿನಗಳಿಂದಲೂ ಏನೂ ತಿಂದಿಲ್ಲ!

ಹೀಗೆನ್ನುತ್ತಿದ್ದಂತೆಯೇ ಅವಳ ನಯನಗಳಿಂದ ಅಶ್ರುಪ್ರವಾಹವು ಹರಿಯತೊಡಗಿತು.

ದಿಗಂಬರಿಯು ಕ್ಷಣಕಾಲ ಸುಮ್ಮನಿದ್ದು, ನಂತರ ಹೇಳಿದಳು: ಭಲಾ! ನಾನಿನ್ನು ಈ ಮನೆಯಲ್ಲಿರುವುದಾದರೂ ಹೇಗೆ? ಇನ್ನು ನಾನು ಇಲ್ಲಿರಲಾರೆ. ನಾರಾಯಣೀ! ನಿನಗೆ ಸ್ಪಷ್ಟವಾಗಿ ತಿಳಿಸುತ್ತಿರುವೆನು!

"ನಾನೂ ಇದೇ ವಿಷಯವನ್ನು ನಿನ್ನೊಡನೆ ಬಾಯಾರೆ ಹೇಳಲ ಸಾಧ್ಯವಾಗಲಿಲ್ಲ, ಅಮ್ಮಾ!— ನಿಜವಾಗಿಯೂ ಇನ್ನು ನೀನು ಇಲ್ಲಿರುವುದ

ಸಾಧ್ಯವಿಲ್ಲ. ನಿನ್ನ ಕಣ್ಣುಗಳು ತಾಕಿಯೇ ನನ್ನ ಮುದ್ದು ಕಂದನು ಅರ್ಧ ವಾಗಿಹೋದ! ಇವನು ದುಷ್ಟನೇ ಆಗಲಿ, ಎಂತಹವನೇ ಆಗಲಿ, ನನ್ನ ಮನೆಯಲ್ಲಿ, ನನ್ನ ಕಣ್ಣುಗಳ ಮುಂದೆ, ಅವನನ್ನು ಯಾರೂ ಶಿಕ್ಷಿಸಲಾರರು! ಈ ದಿನ ಮಾತ್ರ ನೀನು ಇಲ್ಲೇ ಇರು; ಆದರೆ, ನಾಳೆ ಖಂಡಿತವಾಗಿಯೂ ನಿನ್ನ ಮನೆಗೆ ಹೊರಟುಹೋಗಬೇಕು! ನಿನ್ನ ವೆಚ್ಚಕ್ಕೆ ಬೇಕಾಗುವ ಹಣ ಕಾಸನ್ನು ನಾನು ಪ್ರತಿ ತಿಂಗಳು ಕಳುಹಿಸಿಕೊಡುವೆನು. ಇನ್ನು ನೀನು ಇಲ್ಲಿರುವದು ಖಂಡಿತವಾಗಿಯೂ ಸಾಧ್ಯವಿಲ್ಲಮ್ಮಾ!" ಎಂದಳು ನಾರಾಯಣಿ.

ದಿಗಂಬರಿಯು ತುಸು ಹೊತ್ತು ಸ್ತಂಭೀಭೂತಳಾಗಿ ನಿಂತಿದ್ದು, ನಂತರ ಮೆಲ್ಲನೆ ಹೊರಕ್ಕೆ ಹೊರಟುಹೋದಳು. ರಾಮನು ಅದೇ ರೀತಿ ತನ್ನ ಮುಖ ವನ್ನ ನಾರಾಯಣಿಯ ಹೃದಯದಲ್ಲಿ ಮರೆಮಾಡಿಕೊಂಡು "ಇಲ್ಲ ಅತ್ತಿಗೆ! ಅವರು ಇಲ್ಲೇ ಇರಲಿ! ಇನ್ನುನಾನು ಸರಿಯಾಗಿರುವನು, ನನಗೆ 'ಸುಮತಿ' ಯುಂಟಾಗಿದೆ! ಮುಂದೆ ನಾನು ಹೇಗಿರುವೆನೆಂಬುದನ್ನು ನೀನೇ ನೋಡು"! ಎಂದನು.

ನಾರಾಯಣಿಯು ಮತ್ತೊಮ್ಮೆ ಮುಖವನ್ನೆತ್ತಿ, ಹಣೆಯನ್ನು ಮುದ್ದಿಟ್ಟು, ಅಶ್ರುಪೂರಿತ ನಯನಗಳ ನಡುವೆ ಒಮ್ಮೆ ನಸುನಗೆ ಬೀರಿ "ನೀನಿನ್ನು ಊಟ ಮಾಡು, ಕಂದ! ಎಂದಳು.

---

# ಅನುರಾಧಾ

## ೧

ಹುಡುಗೆಯ ವಿವಾಹಯೋಗ್ಯ ವಯಸ್ಸನ್ನು ಕುರಿತು ಎಷ್ಟು ಸಟಿ ಆಡಬೇಕೊ ಅಷ್ಟನ್ನೂ ಆಡಿದುದಾಯಿತು. ಅದರ ಮೇರೆಯನ್ನೂ ಮೀರಿ ದುದಾಯಿತು. ಮದುವೆಯ ಆಶೆಯೂ ಹಾರಿಹೋಗುತ್ತಿರುವದು. ಅಹಹ ಇದೆಂತಹ ಮಾತು! ಎಂಬ ಮಾತಿನಿಂದ ಮೊದಲುಗೊಂಡು ಹುಡುಗೆಯ ಮಕ್ಕಳು-ಮರಿಗಳ ಸಂಖ್ಯೆಯನ್ನು ವಿಚಾರಿಸುವದರಲ್ಲಿಯೂ ಈಗ ಯಾರಿಗೂ ಸ್ವಾರಸ್ಯ ಉಳಿದಿಲ್ಲ. ಈ ಬಗೆಯ ಚೇಷ್ಟೆ ತಮಾಷೆಗಳೂ ಸಮಾಜದಲ್ಲಿ ವ್ಯರ್ಥವೆಂದು ಪರಿಗಣಿಸದೆ ಗತಿಯಿಲ್ಲ. ಅನುರಾಧೆಯಾದರೂ ಈ ಪರಿಸ್ಥಿತಿಯ ಹೊರಗಿರಲಿಲ್ಲ. ಈ ಹುಡುಗೆಯ ವಿಷಯದಲ್ಲಿ ನಡೆದ ಘಟನೆಯು ಪುರಾತನ ಕಾಲದ್ದಲ್ಲ, ಅತ್ಯಂತ ಆಧುನಿಕ ಯುಗದ್ದು. ಇಂತಹ ಈಗಿನ ಕಾಲದಲ್ಲಿಯೂ ವರದಕ್ಷಿಣೆ, ಜನ್ಮನಕ್ಷತ್ರ, ರಾಶಿ, ಕುಲ, ಶೀಲ ಮೊದಲಾದವು ಗಳನ್ನು ಕುರಿತು ವಿಚಾರ ಮಾಡುತ್ತ ಮಾಡುತ್ತ ಅನುರಾಧೆಗೆ ಇಪ್ಪತ್ತು ಮೂರು ವರ್ಷಗಳು ತುಂಬಿಹೋದವು. ಆಕೆಗೆ ಯೋಗ್ಯ ವರನು ಸಿಕ್ಕಲಿಲ್ಲ. ಇವೊತ್ತು ಬೆಳಗ್ಗೆ ಜಮೀನುದಾರರ ಕಚೇರಿಯಲ್ಲಿಯೂ ಇದರದೇ ಚರ್ಚೆ ನಡೆದಿದ್ದಿತು. ಹೊಸ ಜಮೀನುದಾರರ ಹೆಸರು ಹರಿಹರ ಘೋಷಾಲ ಎಂದು; ಕಲಕತ್ತೆಯ ನಿವಾಸಿಗಳು. ಅವರ ಮಗ ವಿಜಯ ಊರನ್ನು ನೋಡಲು ಬಂದಿರುವ. ವಿಜಯ ಬಾಯೊಳಗಿದ್ದ ಚುರೂಟನ್ನು ಕೆಳಗಿಟ್ಟು ''ಗಗನ ಚಟರ್ಜಿಯ ಸಹೋದರಿಯೆ ? ಮನೆಯನ್ನು ಬಿಡುವುದಿಲ್ಲವೇ ?'', ಎಂದು ಕೇಳಿದ.

ಸುದ್ದಿಯನ್ನು ತಂದವನು ''ಹೇಳಬೇಕಾದುದನ್ನೆಲ್ಲ ಚಿಕ್ಕ ಜಮೀನು ದಾರರು ಇಲ್ಲಿಗೆ ಬಂದಾಗ ಹೇಳುವೆನೆಂದು ಹೇಳಿದಳು'' ಎಂದ.

ವಿಜಯ ಕೋಪದಿಂದ ''ಅವಳು ಹೇಳಿದುದರ ಅರ್ಥವೇನು ? ನಾನು ಮನೆಯವರನ್ನೆಲ್ಲ ಹೊರಗೆ ಹಾಕಲು ಅವಳ ಮನೆಯ ವರೆಗೆ ಹೋಗಬೇಕು ಎಂದಲ್ಲವೆ! ಆಳು ಮಕ್ಕಳಿಂದ ಈ ಕೆಲಸವಾಗದೇನು ?'' ಎಂದ.

ಅವನು ಸುಮ್ಮಗಿದ್ದ. ವಿಜಯ ಪುನಃ "ಇದರಲ್ಲಿ ಹೇಳುವದ ಕೇಳುವದು ಏನೂ ಇಲ್ಲ ವಿನೋದ!—ನಾನು ಯಾವುದನ್ನೂ ಕೇಳೆ. ಆದಾಗ್ಯೂ ಇದಕ್ಕಾಗಿ ನಾನೇ ಏಕೆ ಆಕೆಯ ಬಳಿಗೆ ಹೋಗಬೇಕು? ಆಕೆಯೇ ಬಂದು ತನ್ನ ತೊಂದರೆಯನ್ನು ತೋಡಿಕೊಳ್ಳಲಾರಳೇನು?" ಎಂದ.

ವಿನೋದನೆಂದ "ನಾನೂ ಇದನ್ನೇ ಹೇಳಿದ್ದೆ. ಅನುರಾಧೆಯೆಂದಳು—ನಾನೂ ಸತ್ಕುಲದಲ್ಲಿ ಜನಿಸಿದವಳು, ವಿನೋದಣ್ಣ, ಒಂದು ಬಾರಿ ಮನೆಯನ್ನೇ ಬಿಟ್ಟು ಹೋಗುವದಿದ್ದಲ್ಲಿ ಅವರಿಗೆ ಒಮ್ಮೆ ಹೇಳಿಯೆ ಬಿಟ್ಟು ಹೋಗುವೆ, ಬಾರಿಬಾರಿ ಹೋಗಲಾರೆ."

"ಏನೆಂದು ಹೇಳಿದೆ ಆಕೆಯ ಹೆಸರು-ಅನುರಾಧಾ? ಹೆಸರು ಬಹಳ ಮೋಹಕವಾಗಿದೆ, ಆದುದರಿಂದಲೇ ಇದುವರೆಗೆ ಅಹಂಕಾರವು ಹೋಗಿಲ್ಲ!"

"ಇಲ್ಲ ರಾಯರೆ."

ವಿನೋದ ಊರಿನ ಒಬ್ಬ ಸಜ್ಜನ. ಅವನೇ ಅನುರಾಧೆಯ ದುರ್ದೆಶೆಯ ಇತಿಹಾಸವನ್ನು ಹೇಳುತ್ತಿದ್ದ. ಆದರೆ ಅನತಿಪೂರ್ವ ಇತಿಹಾಸದ ಒಂದು ಅತಿಪೂರ್ವ ಇತಿಹಾಸವೂ ಇರುವದು. ಅದನ್ನೇ ಇಲ್ಲಿ ಹೇಳಲಾಗುವುದು—

ಊರಿನ ಹೆಸರು ಗಣೇಶಪುರ. ಒಂದಾನೊಂದು ಕಾಲದಲ್ಲಿ ಅದು ಅನುರಾಧೆಯ ಪೂರ್ವಜರದಾಗಿದ್ದಿತು; ಐದಾರು ವರ್ಷಗಳ ಹಿಂದೆ ಬೇರೊಬ್ಬರ ಕೈಗೆ ಹೋಯಿತು. ಈ ಆಸ್ತಿಯ ಉತ್ಪನ್ನ ವರ್ಷಕ್ಕೆ ಎರಡು ಸಾವಿರ ರೂಪಾಯಿ ಮಿಕ್ಕಲಾರದು. ಆದರೂ ಅನುರಾಧೆಯ ತಂದೆ ಅಮರ ಚಟರ್ಜಿಯವರು ಇಪ್ಪತ್ತು ಸಾವಿರ ರೂಪಾಯಿ ಉತ್ಪನ್ನದಾರರಂತೆ ಮನೆಯಲ್ಲಿ ವ್ಯವಸ್ಥೆಯನ್ನಿಟ್ಟಿದ್ದರು. ಆದುದರಿಂದ ಸಾಲವಾಗಿ ಇರುವ ಮನೆಯು ಡಿಕ್ರಿಯಾಗಿ ಹೋಗಿಬಿಟ್ಟಿತು; ಡಿಕ್ರಿ ಆಗಿದ್ದಿತು—ಆದರೆ ಇನ್ನು ಕೈ ಬಿಟ್ಟು ಹೋಗಿರಲಿಲ್ಲ. ಸಾಹುಕಾರ ಹೆದರಿ ಇನ್ನೂ ಹಾಗೆಯೇ ಬಿಟ್ಟಿದ್ದ. ಚಟರ್ಜಿಯವರು ಕುಲೀನರಿದ್ದಷ್ಟೇ ಜಪ-ತಪಾದಿಗಳಲ್ಲೂ ಪ್ರಸಿದ್ಧರಾಗಿದ್ದರು. ಬುಡ-ಭದ್ರವಿಲ್ಲದ ಗೃಹಸ್ಥಿತಿಯ ದೋಣಿಯಲ್ಲಿ ನೀರು ಕಂಠಮಟ ತುಂಬಿದ್ದಿತು. ಇನ್ನೂ ಮುಳುಗಿರಲಿಲ್ಲ. ಹಿಂದುತ್ವದ ಬಿರುಗಾಳಿಯು ಅದನ್ನು ಹಾಗೂ ಹೀಗೂ

ಮಾಡಿ ಮುಳುಗಿಸದೆ ಮುಂದಕ್ಕೆ ನೂಕುತ್ತ ಬಂದಿತು. ಅಮರಚಟರ್ಜಿಯವರ ಕಾಲದಲ್ಲಿಯೂ ಮುಳುಗಗೊಟ್ಟಿರಲಿಲ್ಲ. ಎಂದಬಳಿಕ ಅವರ ಕಾಲವೂ ಒಳ್ಳೆಯ ರೀತಿಯಲ್ಲೇ ಕಳೆಯಿತೆಂದು ಹೇಳಬಹುದು. ಅವರು ಸತ್ತುದೂ ಠೀವಿಯಲ್ಲಿ; ಅವರ ಶ್ರಾದ್ಧ ಮುಂತಾದವು ಕೂಡ ಠೀವಿಯಲ್ಲಿ ಸಾಂಗವಾದುವು. ಆದರೆ ಅವರೊಡನೆಯೆ ಆಸ್ತಿಯ ಇತಿಶ್ರೀಯೂ ಆಯಿತು. ಇಷ್ಟು ದಿನಗಳ ವರೆಗೆ ಮೂಗು ಮೇಲಕ್ಕೆ ಮಾಡಿಕೊಂಡು ನಿಂತ ದೋಣಿಗೆ ಈಗ ಮುಳುಗಲು ವೇಳೆಯೇ ಹಿಡಿಯಲಿಲ್ಲ. ಕುಲೀನ, ದೊಡ್ಡ ಮನೆತನದ ಆ ದೋಣಿಯು ಮಾನಮರ್ಯಾದೆಯನ್ನು ತನ್ನ ಕೂಡ ತೆಗೆದುಕೊಂಡು ಅಗಾಧವಾದ ನೀರಿನಲ್ಲಿ ಮುಳುಗಿಹೋಯಿತು.

ತಂದೆಯು ತೀರಿದ ಬಳಿಕ ಗಗನ ಚಟರ್ಜಿಗೆ ಡಿಕ್ರಿಯಾದ ಒಂದು ಹಳೆಯ ಮನೆ, ಕಂಟಮಟ ಸಾಲದಲ್ಲಿ ಮುಳುಗಿದ ಪಿತ್ರಾರ್ಜಿತ ಆಸ್ತಿ, ನಾಯಿ, ಆಕಳು-ಎತ್ತು, ಬೆಕ್ಕು ಮೊದಲಾದ ಪಶುಗಳು ದೊರೆತುವು. ಅಲ್ಲದೆ ತಂದೆಯ ದ್ವಿತೀಯ ಸ್ತ್ರೀಯಿಂದ ಉತ್ಪನ್ನಳಾದ ಕುಮಾರಿ ಕನ್ಯಾ ಅನುರಾಧೆಯ ಭಾರ ತಲೆಯ ಮೇಲೆ ಬಿದ್ದಿತು.

ಈಗ ಆಕೆಗೆ ಒಬ್ಬ ವರ ಸಿಕ್ಕ, ವರ ಊರಿನ ಒಬ್ಬ ಸಭ್ಯಗೃಹಸ್ಥರು. ಅವರಿಗೆ ನಾಲ್ಕಾರು ಮಕ್ಕಳು ಮರಿಗಳು. ಅವರ ಮೊದಲ ಹೆಂಡತಿ ಮಕ್ಕಳು ಮರಿಗಳನ್ನು ತೊರೆದು ತೀರಿಕೊಂಡಿದ್ದಳು. ವಿವಾಹದ ಬಯಕೆ ಅವರಿಗೆ ಹತ್ತಿತ್ತು.

ಅನುರಾಧೆಯೆಂದಳು "ಅಣ್ಣ, ಭಾಗ್ಯದಲ್ಲಿ ರಾಜಪುತ್ರನೊಡನೆ ವಿವಾಹವಂತೂ ಹಣೆಯಲ್ಲಿ ಬರೆದಿಲ್ಲ; ಅವರೊಡನೆಯೆ ಮದುವೆ ಮಾಡಿ ಕೊಟ್ಟುಬಿಡು; ಹಣವಂತರು, ಊಟಉಡಿಗೆಗಂತೂ ಕೊರತೆಯಿಲ್ಲ."

ಗಗನ ಆಶ್ಚರ್ಯದಿಂದ "ಇದೆಂತಹ ಮಾತು! ತ್ರಿಲೋಚನರ ಬಳಿಯಲ್ಲಿ ಹಣವಿದೆಯೆಂಬುದನ್ನು ಒಪ್ಪಿದೆ. ಆದರೆ ಅವರ ತಂದೆಯವರು ತಮ್ಮ ಕುಲವನ್ನು ಕೆಡಿಸಿ ಸತಿಪುರದ ಚಕ್ರವರ್ತಿಗಳ ಮನೆಯಿಂದ ಕನ್ಯೆಯನ್ನು ತಂದು ಮದುವೆಯಾಗಿದ್ದರು. ಇದು ನಿನಗೆ ಗೊತ್ತಿಲ್ಲವೇ? ಅವರಿಗೆ ಮಾನ ಮರ್ಯಾದೆ ಏನಿದೆ?" ಎಂದ.

ಮಾನ-ಮರ್ಯಾದೆ, ಕುಲ ಇರಲಿ, ಬಿಡಲಿ, ಹಣ ಇದೆಯಲ್ಲವೆ?

ಕುಲವನ್ನು ಕಟ್ಟಿಕೊಂಡು ಕೂಳಿಲ್ಲದೆ ಸಾಯುವುದಕ್ಕಿಂತ ಒಂದು ತುತ್ತು ಅನ್ನ ಉಂಡು ಬದುಕುವುದು ಒಳ್ಳೆಯದು ಅಣ್ಣಾ !"

ಗಗನ ತಲೆಯಲ್ಲಾಡಿಸುತ್ತ "ಇದಾಗದು, ಆಗಲಾರದು" ಎಂದು ಹೇಳಿದುದಕ್ಕೆ ಅನುರಾಧೆಯು "ಅದೇಕೆ ಆಗಲಾರದು ಹೇಳು ? ತಂದೆಯವರು ಇಂತಹ ಎಲ್ಲ ಸಂಗತಿಗಳ ಕಡೆಗೆ ಲಕ್ಷ್ಯಗೊಡುತ್ತಿದ್ದರು; ಆದರೆ ನೀನೇಕೆ ಕೊಡಬಾರದು ? ಎಂದು ಉತ್ತರವಿತ್ತಳು.

ತಂದೆಯ ಸಾಮಾಜಿಕ ಧಾರ್ಮಿಕ ಕಟ್ಟಳೆಯ ಕಠೋರ ಪಾಲನೆಯು ಮಗನಲ್ಲಿ ಇಲ್ಲವೆಂದು ಹೇಳುವುದು ಇಲ್ಲಿ ಅಗತ್ಯವಿರುವದು. ಅವನು ಮದ್ಯ-ಮಾಂಸ, ಆನುಷಂಗಿಕ ವಿಷಯಗಳಲ್ಲಿ ಮೋಹಯುಕ್ತನಾಗಿರುವ; ತನ್ನ ಹೆಂಡತಿಯು ತೀರಿಕೊಂಡಂದಿನಿಂದ ಇನ್ನೊಂದು ಹಳ್ಳಿಯ ನೀಚಕುಲದ ಓರ್ವ ಹೆಣ್ಣು ಅವನ ಹೆಂಡತಿಯ ಅಭಾವವನ್ನು ದೂರಮಾಡುತ್ತಿರುವಳು ಎಂಬ ಸಂಗತಿಯನ್ನು ಎಲ್ಲರೂ ಬಲ್ಲರು.

ಗಗನನಿಗೆ ತಂಗಿಯ ಮಾತು ಮನಕ್ಕೆ ಹತ್ತಿತು ಅವನು ಗರ್ಜಿಸಿ "ನನ್ನಲ್ಲಿ ಧಾರ್ಮಿಕ ವ್ಯರ್ಥ ಕಟ್ಟುರತೆಯಿಲ್ಲ. ಆದರೆ ಕುಲಕೆಡಿಸಿಕೊಂಡ ಮನೆಗೆ ನಿನ್ನನ್ನು ಕೊಟ್ಟು ನಾನು ನನ್ನ ಹದಿನಾಲ್ಕು ಪೀಳಿಗೆಗಳನ್ನು ನರಕದಲ್ಲಿ ನೂಕಬೇಕೇನು ? ನಾವು ಕೃಷ್ಣನ ಸಂತಾನ, ಸ್ವಭಾವ ಕುಲೀನ, ಹೋಗು ಹೋಗು, ಇನ್ನು ಇಂತಹ ಹೊಲಸು ಮಾತುಗಳನ್ನಾಡಬೇಡ !" ಎಂದು ನುಡಿದು ಸಿಟ್ಟಿನಿಂದ ಹೊರಟು ಹೋದ. ತ್ರಿಲೋಚನ ಗಂಗೋಪಾಧ್ಯಾಯನನ್ನು ವರನನ್ನಾಗಿ ಮಾಡುವ ಮಾತು ಅಷ್ಟಕ್ಕೇ ನಿಂತುಹೋಯಿತು.

ಗಗನ ಹರಿಹರ ಘೋಷಾಲರಿಗೆ ಶರಣುಹೋದ.—ಕುಲೀನ ಬ್ರಾಹ್ಮಣನನ್ನು ಹೇಗಾದರೂ ಮಾಡಿ ಋಣಮುಕ್ತ ಮಾಡಲೇಬೇಕು. ಕಲಕತ್ತೆಯಲ್ಲಿ ಕಟ್ಟಿಗೆಯ ವ್ಯಾಪಾರ ಮಾಡಿ ಲಕ್ಷಾಧೀಶರಾಗಿದ್ದಾರೆ ಹರಿಹರರು. ಒಂದಾನೊಂದು ಸಮಯ ಇದೇ ಊರಲ್ಲಿ ಅವರ ಅಜ್ಜನ ಮನೆಯಿದ್ದಿತು; ಬಾಲ್ಯದಲ್ಲಿ ಇವರ ಸುದಿನಗಳನ್ನು ಅವರು ನೋಡಿದವರು. ಅನೇಕ ಸಲ ಇವನ ಮನೆಯಲ್ಲಿ ಅವರು ಹೊಟ್ಟೆತುಂಬ ಪುರಿ-ಪಲ್ಯ-ಮಿಠಾಯಿಗಳನ್ನು ತಿಂದವರು; ಹಣ ಅವರಿಗೆ ದೊಡ್ಡದಲ್ಲ; ಆದುದರಿಂದಲೇ ಒಪ್ಪಿಕೊಂಡರು. ಚಟರ್ಜಿಯವರ ಎಲ್ಲ ಸಾಲವನ್ನು ತೀರಿಸಿ ಹರಿಹರರು ಗಣೇಶಪುರವನ್ನು ಕೊಂಡು-ಕೊಂಡರು. ಕೊಂಡವರಿಗೆ ರೂಪಾಯಿಗಳನ್ನು ಕೊಟ್ಟು ಮನೆಯನ್ನು

ಹಿಂತಿರುಗಿ ಹಡೆದರು ಮತ್ತು ಮನೆಯ ಹೊರಗಿನ ಎರಡು ಮೂರು ಕೋಣೆಗಳನ್ನು ಆಫೀಸಿಗಾಗಿ ಬಿಡಬೇಕೆಂದೂ ಒಳಗೆ ಮೊದಲಿನಂತೆಯೆ ಗಗನ ಇರಬೇಕೆಂದೂ ಬಾಯಿ ಕರಾರು ಆಗಿದ್ದಿತು.

ಜಮೀನುದಾರಿಯನ್ನು ಕೊಂಡುದಾಯಿತು; ಆದರೆ ಹೊಸ ಜಮೀನುದಾರರ ಆಧಿಪತ್ಯವನ್ನು ಪ್ರಜೆ ಒಪ್ಪಲು ಸಿದ್ಧರಾಗಲಿಲ್ಲ. ಆಸ್ತಿಯು ಚಿಕ್ಕದು, ಉತ್ಪನ್ನದ ವಸೂಲಿ ಕೆಲಸವೂ ಬಹಳಿಲ್ಲ: ಆದುದರಿಂದ ಆಳಿಕೆಯು ವ್ಯವಸ್ಥೆಯನ್ನು ಬೆಳೆಯಿಸುವಂತಿರಲಿಲ್ಲ. ಆದರೆ ಹರಿಹರರ ಪಕ್ಷದ ಕಾರ್ಯಕರ್ತರು ಗಣೇಶಪುರದಲ್ಲಿ ನಿಲ್ಲದ ಹಾಗೆ ಕೌಶಲ್ಯದಿಂದ ವ್ಯವಸ್ಥೆಯನ್ನು ಮಾಡತೊಡಗಿದ. ಗಗನನೇ ಕೊನೆಗೆ ತಾನಾಗಿಯೇ ಹರಿಹರರ ಮುಂದೆ ಒಂದು ಗೊತ್ತುವಳಿಯನ್ನು ತಂದು ಊರಿನ ವ್ಯವಸ್ಥೆಯ ಆಡಳಿತವನ್ನು ತನ್ನ ಕೈಗೆ ತೆಗೆದುಕೊಂಡ. ಹಿಂದಿನ ಜಮೀನುದಾರರ ಒಡೆಯ ಇಂದಿನ ಜಮೀನುದಾರರ ಒಡೆಯರಿಗೆ ಆಳುಮಗನಾದ—ಕಾರಕೂನನಾದ. ಅವನು ಪ್ರಜರನ್ನು ತನ್ನ ವಶಕ್ಕೆ ತೆಗೆದುಕೊಂಡ. ಆ ಮೇಲೆ ಹರಿಹರರಿಗೆ ಪ್ರಾಣದಲ್ಲಿ ಪ್ರಾಣ ಬಂದಂತಾಯಿತು. ಆದರೆ ವಸೂಲಿಯ ಕಾರ್ಯವು ಮೊದಲಿನಂತೆಯೆ ಭರದಿಂದ ಸಾಗತೊಡಗಿತು. ಒಂದು ಪೈ ಕೂಡ ರೋಖು ಜಮಾ ಆಗಲಿಲ್ಲ. ಇದೇ ಗಡಿಬಿಡಿಯಲ್ಲಿ ಮತ್ತೆ ಎರಡು ವರುಷಗಳು ಕಳೆದುವು; ಒಂದು ದಿನ ಅಕಸ್ಮಾತ್ ಗಗನ ಚಟರ್ಜಿಯ ಪತ್ತೆಯೆ ಇಲ್ಲ ಎಂಬ ಸಮಾಚಾರವು ಬಂದಿತು ! ಪಟ್ಟಣದಿಂದ ಹರಿಹರರ ಕಾರ್ಯಕರ್ತನೊಬ್ಬ ಬಂದು ವಿಚಾರಣೆ ಮಾಡಲಾಗಿ ವಸೂಲು ಆಗಬೇಕಾದುದೆಲ್ಲ ವಸೂಲಾಗಿದೆ ಅದನ್ನು ಜೇಬಿಗೆ ಹಾಕಿಕೊಂಡು ಗಗನ ಮಾಯವಾಗಿದ್ದಾನೆ ಎಂದು ತಿಳಿದುಬಂದಿತು. ಪೋಲೀಸರಿಗೆ ವರದಿ, ಕೋರ್ಟಿನಲ್ಲಿ ಖಟ್ಲೆ, ಅವನನ್ನು ಹುಡುಕುವ ವ್ಯವಸ್ಥೆ ಮೊದಲಾದುದನ್ನೆಲ್ಲ ಮಾಡಲಾಯಿತು. ಆದರೆ ರೂಪಾಯಿಗಳೂ ಸಿಕ್ಕಲಿಲ್ಲ; ಗಗನನೂ ಸಿಗಲಿಲ್ಲ. ಗಗನ ಸಹೋದರಿ ಅನುರಾಧೆ ಮತ್ತು ದೂರದ ಒಬ್ಬ ನೆಂಟರ ಹುಡುಗ ಮನೆಯಲ್ಲಿ ಇರುತ್ತಿದ್ದರು. ಪೋಲೀಸರು ಇವರಿಬ್ಬರನ್ನೂ ಸಾಕಷ್ಟು ಅರೆದರು, ಅಲ್ಲಾಡಿಸಿದರು; ಆದರೆ ದೊರೆಯಬೇಕಾದುದು ದೊರೆಯಲಿಲ್ಲ.

ವಿಜಯ ವಿಲಾಯತಿಗೆ ಹೋಗಿ ಬಂದಿರುವ. ಅವನು ಪರೀಕ್ಷೆಯಲ್ಲಿ

ಪುನಃ ಪುನಃ ನಾಪಾಸಾದುದರಿಂದ ಹರಿಹರನು ಅವನ ಸಲುವಾಗಿ ಬಹಳ ಸೆಚ್ಚ ಮಾಡಬೇಕಾಯಿತು. ಪಾಸು ಅಂತೂ ಆಗಲಿಲ್ಲ, ಆದರೆ ಅಲ್ಲಿಗೆ ಹೋದುದರಿಂದ ಉಂಟಾದ ಅನುಭವದ ಫಲಸ್ವರೂಪವಾಗಿ ಅವನ ಸ್ವಭಾವ ಸ್ವಲ್ಪ ಸಿಡುಕಿನದಾಗಿರುವುದು. ಅವನು ಸ್ವದೇಶಕ್ಕೆ ಮರಳಿ ಎರಡು ವರ್ಷ ವಾಗಿರುವುದು. ವಿಲಾಯತಿಯಲ್ಲಿ ಪಾಸು ನಪಾಸು ಇವುಗಳಲ್ಲಿ ಭೇದವಿಲ್ಲ ಎಂದು ವಿಜಯನ ಅಭಿಪ್ರಾಯ. ಪುಸ್ತಕಗಳನ್ನು ಬಾಯಿಪಾಠ ಮಾಡಿ ಕತ್ತೆಯೂ ಪಾಸಾಗಬಹುದು; ಪಾಸಾಗಬೇಕೆಂಬ ಉದ್ದೇಶವನ್ನು ಇಟ್ಟು ಕೊಂಡಿದ್ದರೆ ಇಲ್ಲಿಯೆ—ಸ್ವದೇಶದಲ್ಲಿಯೇ ಇದ್ದುಕೊಂಡು ಪಾಠಮಾಡಿ ಪಾಸಾಗಬಹುದಾಗಿದ್ದಿತು; ಪಾಸು ಆಗಲು ಮಾತ್ರ ವಿಲಾಯತಿಗೆ ನಾನು ಹೋಗಲಿಲ್ಲ ಎಂದೂ ಅವನು ಹೇಳುತ್ತಿದ್ದ. ಅದು ಏನೇ ಇರಲಿ, ಅವನು ಊರಿಗೆ ಬಂದು ತಂದೆಯವರು ಮಾಡುತ್ತಿದ್ದ ಕಟ್ಟಿಗೆಯ ವ್ಯಾಪಾರವನ್ನು ಕೈಯಲ್ಲಿ ತೆಗೆದುಕೊಂಡು ಅದನ್ನು ಮೇಲಕ್ಕೆತ್ತಲು ತೊಡಗಿದ. ಈ ವ್ಯಾಪಾರದ ವ್ಯವಸ್ಥೆಯನ್ನು ಮಾಡುತ್ತಿರುವಾಗ ಕಾರ್ಯಕರ್ತರಿಗೆ ಅವನ ಸ್ವಭಾವದ ಪರಿಚಯವಾಗಿರುವದು. ಅವನನ್ನು ಕಂಡರೆ ಅವರಿಗೆ ಹುಲಿಯನ್ನು ಕಂಡಂತಾಗುವದು. ಆವನಿಗೆ ತನ್ನ ವ್ಯಾಪಾರದಲ್ಲಿ ಉಸಿರಾಡಿಸಲಿಕ್ಕೂ ಸಮಯವು ಸಿಕ್ಕುತ್ತಿರಲಿಲ್ಲ. ಇಂತಹ ಸಮಯದಲ್ಲಿಯೆ ಅವನಿಗೆ ಗಣೇಶ ಪುರದ ವರ್ಣನೆಯು ಒಂದು ದಿನ ಕೇಳಲು ದೊರೆಯಿತು. ಅವನೆಂದ–ಇದು ಗೊತ್ತಿದ್ದ ಮಾತೇ. ತಂದೆಯವರು ಮಾಡುವದೆಲ್ಲ ಹೀಗೆಯೆ. ಇದಕ್ಕೆ ಬೇರೆ ಯಾವ ಉಪಾಯವೂ ಇಲ್ಲ. ನಿಷ್ಕಾಳಜಿತನದಿಂದ ಕಾರ್ಯ ಮಾಡಿದರೆ ನಡೆಯದು. ನಾನೇ ಸ್ವತಃ ಗಣೇಶಪುರಕ್ಕೆ ಹೋಗಿ ಆಸ್ತಿಯ ವ್ಯವಸ್ಥೆಯನ್ನು ಸರಿಪಡಿಸಿ, ಬರಬೇಕು. ಅದಕ್ಕಾಗಿಯೆ ಆವನು ಗಣೇಶಪುರಕ್ಕೆ ಬಂದಿರುವ. ಇಷ್ಟು ಚಿಕ್ಕ ಕೆಲಸಕ್ಕಾಗಿ ಈ ಊರಲ್ಲಿ ಇರುವದು ಒಳ್ಳೆಯದಲ್ಲ, ಬೇಗನೆ ಕಾರ್ಯವನ್ನು ಮುಗಿಸಿಕೊಂಡು ತಿರುಗಿ ಅವನು ಕಲಕತ್ತೆಗೆ ಹೋಗಬೇಕಾಗಿದೆ. ಎಲ್ಲ ಉದ್ಯೋಗಗಳ ಭಾರವು ಈಗ ಅವನ ತಲೆಯ ಮೇಲೆಯೇ. ಅಣ್ಣ ಅಜಯ ಆಟರ್ನಿ ಇರುವ. ಆವನು ಅತ್ಯಂತ ಸ್ವಾರ್ಥಿ, ತನ್ನ ಆಫೀಸು, ತನ್ನ ಹೆಂಡಿರು ಮಕ್ಕಳು ಇವರ ಚಿಂತೆಯಲ್ಲಿಯೇ ಇರುವ. ಗೃಹಸ್ಥಿಕೆಯಲ್ಲಿ ಅವನು ಕುರುಡ, ಆದರೆ ಪಾಲುಗಾರಿಕೆಯಲ್ಲಿಯೇ ಅವನಿಗೆ ಹತ್ತತ್ತು ಕಣ್ಣುಗಳುಂಟಾಗುವವು. ಅವನ ಹೆಂಡತಿ ಪ್ರಭಾವತಿಯು

ಕಲಕತ್ತಾ ಯುನಿವರ್ಸಿಟಿಯ ಪದವೀಧರಳು. ಮನೆಯವರ ಕಾಳಜೀ ಮಾಡುವುದು ಒತ್ತಟ್ಟಿಗೇ ಇರಲಿ, ತನ್ನ ಅತ್ತೆಮಾವಂದಿರು ಇದ್ದಾರೋ ಸತ್ತಾರೋ ಎಂಬುದರ ಪರವೆಯೂ ಇಲ್ಲ ಅವಳಿಗೆ. ಸ್ವಲ್ಪಾದರೂ ಕಾಳಜಿ ತೆಗೆದುಕೊಳ್ಳಲು ಅವಳಿಗೆ ಬಿಡುವಿಲ್ಲ. ಐದಾರು ಕೋಣೆಗಳನ್ನು ತನಗಾಗಿ ಇಟ್ಟುಕೊಂಡು ಅಲ್ಲಿಯೆ ಇರುವರು. ಅವನ ಅಡುಗೆಯವರು ಬೇರೆ, ಆಳು ಮಕ್ಕಳು ಬೇರೆ. ಅವನಲ್ಲಿಗೆ ಪರಿವಾರದ ಇತರ ಜನರು ಹೋಗುವಂತಿಲ್ಲ. ತಂದೆಯವರು ಬೇಡವೆಂದು ಹೇಳಿದ್ದರಿಂದ ಮಾತ್ರ ಮುಸಲ್ಮಾನ ಅಡಿಗೆಯವನು ಇರಲಿಲ್ಲ. ಆದರಿಂದ ಪ್ರಭಾವತಿಗೆ ಆಗಾಗ ಸ್ವಲ್ಪ ಕಷ್ಟವಾಗುತ್ತಿರುವುದು. ಆದರೆ ಮಾವನವರು ಸತ್ತಕೂಡಲೇ ಇದರ ಸೇಡನ್ನು ತೀರಿಸಿಕೊಳ್ಳಲು ಬರುವುದೆಂಬ ಆಸೆಯು ಅವಳಿಗೆ. ಮೈದುನ ವಿಜಯನ ಬಗ್ಗೆ ಅವಳಲ್ಲಿ ತಿರಸ್ಕಾರ; ಆದರೆ ಇತ್ತಿತ್ತಲಾಗಿ ಅವನು ವಿಲಾಯತಿಗೆ ಹೋಗಿ ಬಂದುದರಿಂದ ತಿರಸ್ಕಾರ ಸ್ವಲ್ಪ ಕಡಿಮೆಯಾಗುತ್ತಿರುವುದು ಕಂಡು ಬರುತ್ತಿರುವುದು. ಮೂರು ನಾಲ್ಕು ದಿನ ಅವನನ್ನು ಊಟಕ್ಕೆ ಕರೆದು ಸ್ವತಃ ತಾನೇ ಅಡುಗೆ ಮಾಡಿ ಅವನಿಗೆ ಊಟಕ್ಕೆ ಬಡಿಸಿರುವಳು ಮತ್ತು ಆಗ ತನ್ನ ತಂಗಿ ಅನೀತಾ ಅವಳ ಕೂಡ ವಿಜಯನ ಪರಿಚಯವನ್ನೂ ಮಾಡಿಸಿರುವಳು. ಆಗ ಅನೀತಾ ಬಿ. ಎ. (ಆನರ್ಸ) ಆಗಿ, ಎಂ. ಎ. ಪರೀಕ್ಷೆಯನ್ನು ಕಟ್ಟುವುದರಲ್ಲಿ ತೊಡಗಿದ್ದಳು.

ವಿಜಯ ವಿಧುರ. ಹೆಂಡತಿಯು ತೀರಿದೊಡನೆಯೆ ಅವನು ವಿಲಾಯತಿಗೆ ಹೋಗಿದ್ದ; ಅಲ್ಲಿ ಏನು ಮಾಡಿದ, ಏನು ಮಾಡಲಿಲ್ಲ ಎಂಬುದನ್ನು ತಿಳಿದುಕೊಳ್ಳುವುದರಿಂದ ಏನೂ ಪ್ರಯೋಜನವಿಲ್ಲ. ಆದರೆ ಅವನು ತಿರುಗಿ ಬಂದಂದಿನಿಂದ ಸ್ತ್ರೀಜಾತಿಯ ವಿಷಯವಾಗಿ ಅವನಲ್ಲಿ ವಿರಕ್ತತೆಯೆ ಕಾಣಿಸುತ್ತಿರುವದು. ತಾಯಿಯು ಮದುವೆ ಮಾಡಿಕೊಳ್ಳಲು ಹೇಳಿದಳು; ಅದಕ್ಕೆ ಅವನು ಕಟುವಾಗಿ ಉತ್ತರವಿತ್ತುಬಿಟ್ಟ. ಅಂದಿನಿಂದ ಅವನ ಮದುವೆಯ ವಿಷಯವು ಹಾಗೆಯೆ ಕೆಳಗಿಳಿದು ಹೋಗಿರುವುದು; ಅದಕ್ಕೆ ಮೇಲ್ಬರಲು ಅವಕಾಶವೇ ಇಲ್ಲ.

ಗಣೇಶಪುರಕ್ಕೆ ಬಂದು ಅವನು ಓರ್ವ ಪ್ರಜೆಯ ಮನೆಯಲ್ಲಿ ಹೊರಗಿನ ಎರಡು ಕಿರುಮನೆಗಳನ್ನು ತನ್ನ ವಶಕ್ಕೆ ತೆಗೆದುಕೊಂಡು ಅಲ್ಲಿ ತನ್ನ ಕಚೇರಿ

ಯನ್ನು ಪ್ರಾರಂಭಿಸಿರುವ. ಗಗನನ ಮನೆಯಲ್ಲಿ ಎಷ್ಟು ಕಾಗದ ಪತ್ರಗಳು ಸಿಗಲು ಸಾಧ್ಯವಿದ್ದವೊ ಅವನ್ನೆಲ್ಲ ಈ ಕಚೇರಿಗೆ ತರಲಾಗಿರುವುದು ಮತ್ತು ಅವನ ಸಹೋದರಿ ಅನುರಾಧೆಯನ್ನೂ ಆಕೆಯ ಕೂಡ ಇರುವ ಆಪ್ತ ಹುಡುಗ ನನ್ನೂ ಆದಷ್ಟು ಬೇಗ ಮನೆಬಿಡಿಸಿ ಹೊರಹಾಕುವುದರ ಬಗ್ಗೆ ಪ್ರಯತ್ನವು ನಡೆದಿರುವುದು. ಅಲ್ಲದೆ ವಿನೋದಘೋಷನ ಕೂಡ ಈ ವಿಷಯವನ್ನು ಕುರಿತು ವಿಚಾರವಿನಿಯಮವು ಈಗ ಸ್ವಲ್ಪ ಹೊತ್ತಿನ ಹಿಂದೆ ನಡೆದಿದ್ದಿತು.

ಕಲಕತ್ತೆಯಿಂದ ಇಲ್ಲಿಗೆ ಬರುವಾಗ ವಿಜಯ ತನ್ನ ಏಳೆಂಟು ವರ್ಷದ ಮಗನನ್ನೂ ಸಂಗಡ ಕರೆದುಕೊಂಡು ಬಂದಿದ್ದ.

"ಹಳ್ಳಿಯಲ್ಲಿ ಹಾವು ಚೇಳು ಬಹಳ, ಇಷ್ಟು ಚಿಕ್ಕ ಹುಡುಗನನ್ನು ಕರೆದುಕೊಂಡು ಹೋಗುವುದು ಒಳ್ಳೆಯದಲ್ಲ" ಎಂದು ಅವನ ತಾಯಿ ಹೇಳಿದಾಗ ಅವನು ಎಂದಿದ್ದ "ಅಮ್ಮಾ, ನಿನ್ನ ಹಿರಿಯ ಸೊಸೆಯ ಪ್ರಸಾದದಿಂದ ಮನೆಯಲ್ಲಿ ಉಂಡೆ ತಿನ್ನುವ ಮಕ್ಕಳುಮರಿಗಳ, ಮೊಮ್ಮಕ್ಕಳ ಕೊರತೆ ಏನೂ ಇಲ್ಲ. ಆದರಂತೆಯೆ ಇವನನ್ನೂ ಮಾಡಗೊಡಬೇಡ. ಇವನು ಆಪತ್ತು-ವಿಪತ್ತುಗಳಲ್ಲಿ ಬಿದ್ದು ಮನುಷ್ಯನಾಗಲು ಅವಕಾಶವನ್ನು ಕೊಡು."

ವಿಲಾಯತಿಯ ಸಾಹೇಬರೂ ಸರಿಯಾಗಿ ಇದರಂತೆಯೆ ಮಾತನಾಡುವರೆಂಬುದನ್ನು ಕೇಳಿರುವೆವು. ಆದರೆ ಸಾಹೇಬರ ಮಾತುಗಳಿಗಿಂತ ಭಿನ್ನವಾಗಿ ಸ್ವಲ್ಪಹೆಚ್ಚು ರಹಸ್ಯವಾಗಿರುವ ಒಂದು ವಿಷಯವು ಇಲ್ಲಿರುವುದು. ವಿಜಯ ವಿಲಾಯತಿಯಲ್ಲಿರುವಾಗ ಈ ಮಾತೃಹೀನ ಬಾಲಕನ ದಿನಗಳು ಅನಾದರ-ಅವಹೇಳನೆಯಲ್ಲಿಯೆ ಕಳೆದಿವೆ. ಕುಮಾರನ ಅಜ್ಜಿಯು ಸದಾ ಹೊರಸಿನ ಮೇಲೆ ಮಲಗುವವಳು. ಮನೆಯಲ್ಲಿ ಸಾಕಷ್ಟು ಸಂಪತ್ತು-ವೈಭವ ಇದ್ದರೂ ಅವಳನ್ನು ನೋಡುವವರು ಯಾರೂ ಇಲ್ಲ. ಆದುದರಿಂದ ಕಷ್ಟದಲ್ಲಿ ಬೆಳೆದು ಅವನು ಇಷ್ಟು ದೊಡ್ಡವನಾಗಿರುವ. ವಿಲಾಯತಿಯಿಂದ ತಿರುಗಿ ಬಂದ ಬಳಿಕ ವಿಜಯನಿಗೆ ಈ ಮಾತು ತಿಳಿದುಬಂದಿತು.

ಗಣೇಶಪುರಕ್ಕೆ ಬರುವಾಗ ಅತ್ತಿಗೆಯು ವಿಜಯನಿಗೆ ಸಹಾನುಭೂತಿಯನ್ನು ತೋರಿಸುತ್ತ "ಹುಡುಗನನ್ನು ಸಂಗಡ ಕರೆದುಕೊಂಡು ಹೋಗುತ್ತಿರುವಿರಿ, ಹಳ್ಳಿಯ ಊರು, ಹೊಸ ಸ್ಥಳ, ಹುಷಾರಾಗಿರಿ. ಯಾವಾಗ ಹಿಂತಿರುಗುವಿರಿ ? ಎಂದಿದ್ದಳು.

"ಸಾಧ್ಯವಾದಷ್ಟು ಬೇಗ."

"ಅಲ್ಲಿ ನಮ್ಮದೆಂದು ಮನೆಯೂ ಇರುವುದೆಂದು ಕೇಳಿದ್ದೆ,—ಮಾವನವರು ಕೊಂಡುಕೊಂಡಿದ್ದರು."

"ಕೊಂಡಿದ್ದರು ನಿಜ, ಆದರೆ, ಕೊಂಡುಕೊಳ್ಳುವುದು ಎಂಬುದರ ಅರ್ಥವು 'ಇರುವುದು' ಎಂದಾಗುವುದಿಲ್ಲ ಅತ್ತಿಗೆ ! ಮನೆಯಿದೆ, ಆದರೆ ಅದರ ಮೇಲೆ ನಮ್ಮ ಅಧಿಕಾರವಿಲ್ಲ."

"ಆದರೆ ನೀವು ಈಗ ಸ್ವತಃ ಹೋಗುತ್ತಿರುವಿರಿ; ಇನ್ನು ಅದನ್ನು ಅಧಿಕಾರದಲ್ಲಿ ತೆಗೆದುಕೊಳ್ಳಲು ಹೊತ್ತು ಹಿಡಿಯದು."

"ಹಾಗೆ ಆದೀತೆಂಬ ಆಸೆಯಿದೆ."

ಅದು ನಿಮ್ಮ ವಶಕ್ಕೆ ಬಂದಬಳಿಕ ಸಮಾಚಾರ ತಿಳಿಸಿ."

"ಏಕೆ ಅತ್ತಿಗೆ ?"

"ಹತ್ತಿರದಲ್ಲಿಯೆ ಇದೆ, ಹಳ್ಳಿಯನ್ನು ಎಂದೂ ಕಣ್ಣಿಂದ ನೋಡಿಲ್ಲ; ಒಮ್ಮೆ ಹೋಗಿ ನೋಡಿ ಬರುವೆ. ಅನೀತೆಯ ಕಾಲೇಜೂ ಈಗ ಮುಚ್ಚಿದೆ. ಅವಳೂ ಜೊತೆಗೆ ಬರಲು ಇಚ್ಛಿಸುವಳು" ಎಂದು ಪ್ರಭಾವತಿಯು ಹೇಳಿದಳು.

ಈ ಗೊತ್ತುವಳಿಯನ್ನು ಕೇಳಿ ವಿಜಯ ಪುಳಕಿತನಾಗಿ "ಮನೆಯು ನಮ್ಮ ಅಧಿಕಾರಕ್ಕೆ ಒಳಪಡುತ್ತಲೇ ಸುದ್ದಿಯನ್ನು ತಿಳಿಸುವೆ. ಆಗ 'ಇಲ್ಲ' ಎನ್ನಲಾಗದು, ಅವಶ್ಯ ಬರಬೇಕು" ಎಂದನು.

ಅನೀತಾ ಯುವತಿಯು ಸುಂದರಿಯು, ಬಿ. ಎ. (ಆನರ್ಸ್) ಪಾಸಾದವಳು. ಸಾಮಾನ್ಯವಾಗಿ ಸ್ತ್ರೀಜಾತಿಯನ್ನು ಕುರಿತು ವಿಜಯನಿಗೆ ತಿರಸ್ಕಾರವಿದ್ದರೂ ಓರ್ವ ವಿಶಿಷ್ಟ ರಮಣಿಯನ್ನು ಕುರಿತು—ಇಷ್ಟು ಗುಣಗಳು ಇರುತ್ತಿರುವುದರಿಂದ—ಅವನು ಈ ರೀತಿಯಾಗಿ ಧಾರಣೆಯನ್ನು ಇಟ್ಟುಕೊಂಡಿರುವ ಎಂದು ಹೇಳಲು ಬರುವಂತಿಲ್ಲ. ಆ ಶಾಂತ ಹಳ್ಳಿಯ ನಿರ್ಜನ ಪ್ರಾಂತದಲ್ಲಿ ಪ್ರಾಚೀನ ವೃಕ್ಷಗಳ ನೆರಳಿನಿಂದ ಶಂಪಾದ ಹಳ್ಳಿಯ ದಾರಿಯಲ್ಲಿ, ಏಕಾಂತದಲ್ಲಿ ಅವಳು ತನ್ನೆದುರಿಗೆ ಬರುವಳು ಎಂಬ ಕಲ್ಪನೆಯು ಅವನ ಮನದಲ್ಲಿ ಆ ದಿನ ಬಂದು ಉಯ್ಯಾಲೆಯು ಜುರಿಯನ್ನು ಆಗಾಗ್ಗೆ ಹುಟ್ಟಿಸಿದ್ದಿತು.

೨

ವಿಜಯ ವಿಲಾಯತಿ ತೊಡುಗೆಯನ್ನು ಧರಿಸಿ, ತಲೆಯ ಮೇಲೆ ಹ್ಯಾಟು ಬಾಯಲ್ಲಿ ಚುರುಟು, ಜೇಬಿನಲ್ಲಿ ರಿವಾಲ್ವರ ಇಟ್ಟುಕೊಂಡು ಚಡಿಯನ್ನು ತಿರುಗಿಸುತ್ತ ಕುಲೀನಮನೆತನ-ಹಿರಿಯ ಮನೆತನದ ದೊಡ್ಡ ಮನೆಯನ್ನು ಹೊಕ್ಕ. ಜೊತೆಯಲ್ಲಿ ದೊಣ್ಣೆಯನ್ನು ಹಿಡಿದ ಕೆಲವರು ಮಿರ್ಜಾಪುರದ ಆಳುಗಳು, ಕೆಲವರು ಅನುಯಾಯಿಗಳಾದ ಪ್ರಜರು, ವಿನೋದ ಘೋಷ ಮತ್ತು ಪುತ್ರ ಕುಮಾರರೂ ಇದ್ದರು. ಆಸ್ತಿಯನ್ನು ವಶಕ್ಕೆ ತೆಗೆದುಕೊಳ್ಳುವಾಗ ಜಗಳವಾಗುವ ಸಂಭವವುಂಟೆಂದು ಇಷ್ಟು ಜನರು ಬಂದಿದ್ದರು. ಇಂತಹ ಪರಿಸ್ಥಿತಿಯಿಂದ ಅನುಭವ ಜ್ಞಾನವು ಮಗನಿಗೆ ಆಗುವುದೆಂದು ಬಗೆದು ಮಗನನ್ನು ಜೊತೆಯಲ್ಲಿ ವಿಜಯ ಕರೆದುಕೊಂಡು ಬಂದಿದ್ದ. ವಿನೋದ ಅನುರಾಧೆಯು ಒಬ್ಬಳೇ, ಅದರಲ್ಲಿಯೂ ಹೆಂಗಸು, ಬಲವಂತ ಮಾಡುವ ಪ್ರಸಂಗ ಬಂದಲ್ಲಿ ಅವಳಿಗೆ ಜಯದೊರೆಯದು ಎಂದು ಮೇಲಿಂದ ಮೇಲೆ ಹೇಳುತ್ತ ಬಂದಿದ್ದ. ಆದಾಗ್ಯೂ ರಿವಾಲ್ವರ ಇದ್ದ ಬಳಿಕ ಅದನ್ನು ಬಿಟ್ಟು ಹೋಗುವುದಕ್ಕಿಂತ ತೆಗೆದುಕೊಂಡು ಹೋಗುವುದೇ ಲೇಸೆಂದು ವಿಜಯ ಅದನ್ನು ತನ್ನ ಕೂಡ ತಂದಿದ್ದ.

ವಿಜಯನೆಂದ "ಹುಡುಗಿ ಬಹಳ ದಿಟ್ಟೆಯೆಂದೂ, ಕೂಡಲೇ ಜನರನ್ನು ಒಟ್ಟುಗೂಡಿಸಿಕೊಳ್ಳುವಳೆಂದೂ, ಗಗನನಿಗೆ ಅವಳೇ ಸಲಹೆಗಾರಳಾಗಿದ್ದಳೆಂದೂ ಕೇಳಿರುವೆ. ಸ್ವಭಾವ ಚರಿತ್ರವೂ ಸರಿಯಾಗಿಲ್ಲವೆಂದು ಆಲಿಸಿರುವೆ."

ವಿನೋದನೆಂದ "ಹಾಗೇನೂ ಇಲ್ಲ. ನಾನೇನೂ ಹಾಗಿರುವಳೆಂದು ಕೇಳಿಲ್ಲ."

"ನಾನು ಕೇಳಿರುವೆ."

ಎಲ್ಲಿಯೂ ಯಾರೂ ಇರಲಿಲ್ಲ. ವಿಜಯ ಅಂಗಳದಲ್ಲಿ ಸುಮ್ಮಗೆ ನಿಂತುಕೊಂಡು ನೋಡತೊಡಗಿದ. ಹೌದು, ದೊಡ್ಡವರ ಮನೆಯಂತೆಯೆ ಮನೆ ಇದೆ! ಎದುರಿಗೆ ದೊಡ್ಡ ಪಡಸಾಲೆಯಿದೆ; ಇದುವರೆಗೆ ಬಿದ್ದಿಲ್ಲ, ಬೀಳುವ ಸಿದ್ಧತೆಯಲ್ಲಿದೆ. ಒಂದು ಕಡೆ ಸಾಲಾಗಿ ಕುಳಿತುಕೊಳ್ಳುವ ಕಿರುಮನೆ, ದಿವಾಣಖಾನೆಗಳು ಇವೆ. ಎಲ್ಲವೂ ಒಂದೇ ಸ್ಥಿತಿಯಲ್ಲಿರುವವು. ಪಾರಿವಾಳ

ಗಳು, ಹಕ್ಕಿಗಳು ಮತ್ತು ಕಣಕಸ್ಪಡಿಗಳು ತಮ್ಮ ಸ್ಥಿರನಿವಾಸವನ್ನೂ ಮಾಡಿಕೊಂಡಿವೆ.

ಆಳುಮಗನು ಕೂಗಿದನು "ಯಾರಾದರೂ ಇದ್ದೀರೇನು ?"

ಅವನ ಮರ್ಯಾದೆರಹಿತವಾದ ಕೂಗನ್ನು ಕೇಳಿ ವಿನೋದ ಮತ್ತು ಉಳಿದವರೆಲ್ಲರೂ ನಾಚಿಕೆಪಟ್ಟುಕೊಂಡರು. ವಿನೋದ "ರಾಧಾಜೀಜೀಗೆ ನಾನು ಸುದ್ದಿಯನ್ನು ಮುಟ್ಟಿಸಿ ಬರುವೆ, ಬಾಬೂಸಾಹೇಬರೆ" ಎಂದು ಒಳಗೆ ಹೋದ.

ಅವನ ದನಿ ಮತ್ತು ಮಾತಿನ ರೀತಿಯಿಂದ ಅವನಿಗೆ ಈ ಮನೆತನವನ್ನು ಮರ್ಯಾದೆಗೇಡು ಮಾಡಲು ಸಂಕೋಚವೆನಿಸುವಂತೆ ತೋರುವುದು.

ಅನುರಾಧೆಯು ಅಡುಗೆಯನ್ನು ಮಾಡುತ್ತಿದ್ದಳು. ವಿನೋದ ಒಳಗೆ ಹೋಗಿ ವಿನಯದಿಂದ "ಜೀಜೀ, ಚಿಕ್ಕಬಾಬೂ ಬಂದಿರುವರು; ಹೊರಗೆ ನಿಂತಿರುವರು" ಎಂದ.

ಈ ದುರ್ದಿನದ ದಾರಿಯನ್ನು ಆಕೆಯು ದಿನಾಲು ನೋಡುತ್ತಿದ್ದಳು; ಕೈ ತೊಳೆದುಕೊಂಡು ಎದ್ದು ನಿಂತಳು ಮತ್ತು ಸಂತೋಷನನ್ನು ಕೂಗಿ ಕರೆದು "ಹೊರಗೆ ಜಮುಖಾನೆಯನ್ನು ಹಾಸಿ ಬಾ ಮಗೂ, ಚಿಕ್ಕಮ್ಮ ಈಗ ಬರುವಳು. ಎಂದು ಹೇಳು" ಎಂದು ಹೇಳಿ ವಿನೋದನಿಗೆ "ವಿನೋದಣ್ಣ, ನನಗೆ ಹೊತ್ತಾಗುವುದಿಲ್ಲ ಬರಲು, ಬಾಬೂಸಾಹೇಬರಿಗೆ ಸ್ವಲ್ಪ ಹೊತ್ತು ಕುಳ್ಳಿರಲು ನನ್ನ ಪರವಾಗಿ ಹೇಳು" ಎಂದಳು.

ವಿನೋದ ನಾಚಿಕೆಯಿಂದ "ಏನು ಮಾಡಲಿ ಜೀಜೀ, ನಾವು ಬಡ ಪ್ರಜೆರು, ಜಮೀನುದಾರರು ಅಪ್ಪಣೆ ಕೊಟ್ಟರೆ 'ಇಲ್ಲ' ಎನ್ನಲಾಗುವುದಿಲ್ಲ. ಆದುದರಿಂದಲೇ—" ಎಂದ

"ನನಗೆ ಅದು ಗೊತ್ತು ವಿನೋದಣ್ಣ !"

ವಿನೋದ ಹೊರಟು ಹೋದ. ಹೊರಗೆ ಜಮುಖಾನೆಯನ್ನು ಹಾಸಿಯಾಯಿತು ಆದರೆ ಅದರ ಮೇಲೆ ಕುಳಿತುಕೊಳ್ಳಲಿಲ್ಲ ವಿಜಯ; ಛಡಿಯನ್ನು ತಿರುವುತ್ತ ಅಡ್ಡಾಡತೊಡಗಿದ; ಚುರುಟು ಸೇವನೆ ಮಾಡತೊಡಗಿದ.

ಐದಾರು ನಿಮಿಷಗಳ ನಂತರ ಸಂತೋಷ ಬಾಗಿಲ ಹೊರಗೆ ಬಂದು

ಬಾಗಿಲ ಕಡೆಗೆ ಸನ್ನೆ ಮಾಡುತ್ತ, ಅಂಜು ಅಂಜುತ್ತ "ಚಿಕ್ಕಮ್ಮ ಬಂದಿರುವರು" ಎಂದ.

ವಿಜಯ ತಡವರಿಸಿ ನಿಂತ. ದೊಡ್ಡ ಮನೆತನದ ಹುಡುಗೆ, ಆಕೆಯನ್ನು ಯಾವ ರೀತಿ ಸಂಬೋಧಿಸಬೇಕು ಎಂಬುದು ತಿಳಿಯದಂತಾಯಿತು. ಆದರೆ ತನ್ನ ನಿರ್ಬಲತೆಯನ್ನು ವ್ಯಕ್ತಮಾಡುವುದರಿಂದ ಕಾರ್ಯ ನಡೆಯದು. ಆದುದರಿಂದ ಅವನು ಗಂಡು ದನಿಯಲ್ಲಿ ಒಗಿಳರುವ ಸ್ತ್ರೀಯನ್ನು ಉದ್ದೇಶಿಸಿ "ಈ ಮನೆಯು ನಮ್ಮದು, ಇದನ್ನು ನೀವು ಬಲ್ಲಿರಿ ತಾನೇ ?" ಎಂದ.

"ಬಲ್ಲೆ" ಎಂದು ಉತ್ತರ ಬಂದಿತು.

"ಹಾಗಿದ್ದಲ್ಲಿ ಇದನ್ನು ಬಿಟ್ಟು ಹೋಗುವುದಿಲ್ಲವೇಕೆ ?"

ಅನುರಾಧೆಯು ಮೊದಲಿನಂತೆ ತನ್ನ ಅಕ್ಕನ ಮಗನಿಂದ ತನ್ನ ಉತ್ತರವನ್ನು ಹೇಳಿಸಲು ಯತ್ನಿಸಿದಳು; ಆದರೆ ಹುಡುಗ ಹುಷಾರಿ ಇರಲಿಲ್ಲ; ಅಲ್ಲದೆ ಹೊಸ ಜಮೀನುದಾರರ ಬಗ್ಗೆ ಅವನಿಗೆ ಅಂಜಿಕೆ. ಆದುದರಿಂದ ಅವನ ಬಾಯಿಂದ ಮಾತುಗಳು ಸ್ಪಷ್ಟವಾಗಿ ಹೊರಡುತ್ತಿರಲಿಲ್ಲ. ವಿಜಯ ಐದಾರು ನಿಮಿಷ ಸಹಿಸುತ್ತ ತಿಳಿದುಕೊಳ್ಳಲು ಯತ್ನಿಸಿದ. ಬಳಿಕ ಅವನು ಗಟ್ಟಿಯಾಗಿ "ನಿನ್ನ ಚಿಕ್ಕಮ್ಮನವರಿಗೆ ಹೇಳಬೇಕಾದುದನ್ನು ಎದುರಿಗೆ ಬಂದು ಹೇಳಲು ಹೇಳು. ಹಾಳುಮಾಡಲು ಹೊತ್ತು ಇಲ್ಲ ನನಗೆ. ನಾನು ಹುಲಿ ಕರಡಿಯಲ್ಲ—ಅವರನ್ನು ತಿಂದುಬಿಡಲು. ಮನೆಯನ್ನೇಕೆ ಬಿಡುವುದಿಲ್ಲ ಹೇಳಿರಿ ?" ಎಂದ.

ಅನುರಾಧೆಯು ಹೊರಗೆ ಬರಲಿಲ್ಲ: ಆಕೆಯು ಅಲ್ಲಿಂದಲೇ ಮಾತಾಡಿದಳು. ಸಂತೋಷನ ಮೂಲಕ ಮಾತಾಡದೇ ತಾನೇ ಆಕೆಯು ಸ್ಪಷ್ಟವಾಗಿ "ಮನೆಯನ್ನು ಬಿಡುವ ಮಾತಾಗಿರಲಿಲ್ಲ. ತಮ್ಮ ತಂದೆಯವರು-ಹರಿಹರ ಬಾಬುಗಳು-ಈ ಮನೆಯ ಒಳಭಾಗದಲ್ಲಿ ನಾವು ಇರಬಹುದೆಂದು ಹೇಳಿದ್ದರು."

"ಕಾಗದ-ಪತ್ರಗಳು ಏನಾದರೂ ಉಂಟೇನು ?"

"ಏನೂ ಇಲ್ಲ. ಆದರೆ ಅವರು ಇನ್ನೂ ಇರುವರು, ಅವರನ್ನೇ ವಿಚಾರಿಸಿದರೆ ತಿಳಿಯುವುದು."

"ವಿಚಾರಿಸುವ ಅಗತ್ಯವಿಲ್ಲ. ಈ ಕರಾರನ್ನು ಏಕೆ ಬರೆಯಿಸಿಕೊಳ್ಳಲಿಲ್ಲ ?"

"ಅಣ್ಣನಿಗೆ ಇದು ಅಗತ್ಯವೆಂದೆನಿಸಲಿಲ್ಲ. ಅವರ ಬಾಯಿಮಾತಿನಗಿಂತ ಕರಾರುಪತ್ರ ಮಹತ್ವವಾದುದೆಂದು ಅಣ್ಣನಿಗೆ ಗೊತ್ತಿರಲಿಕ್ಕಿಲ್ಲ!"

ಈ ಮಾತಿಗೆ ಸರಿಯಾದ ಉತ್ತರವು ವಿಜಯನಿಗೆ ಹೊಳೆಯದಾದುದರಿಂದ ಅವನು ಸುಮ್ಮನಾದ ಆದರೆ ಮರುಕ್ಷಣವೇ ಒಳಗಿಂದ ಉತ್ತರವು ಬಂದಿತು. ಆದರೆ, "ಸ್ವತಃ ಅಣ್ಣನಿಂದ ಕರಾರುಗಳನ್ನು ಪಾಲಿಸಕ್ಕಾಗದಿರುವುದರಿಂದ ಎಲ್ಲ ಕರಾರುಗಳೂ ಮುರಿದುಹೋದುವು. ಈ ಮನೆಯಲ್ಲಿ ಇನ್ನು ಇರಲು ನಮಗೆ ಅಧಿಕಾರವಿಲ್ಲ. ಆದರೆ ನಾನು ಒಬ್ಬಳೇ ಹೆಂಗಸು ಮತ್ತು ಈ ಅನಾಥ ಮಗುವೊಂದು. ಇವನಿಗೆ ತಂದೆ ತಾಯಿ ಇಲ್ಲ ನಾನೇ ಬಾಲ್ಯದಿಂದ ಸಾಕಿ ದೊಡ್ಡವನನ್ನಾಗಿ ಮಾಡಿರುವೆ. ನಮ್ಮ ಈ ದುರ್ದೆಶೆಯನ್ನು ನೋಡಿ ದಯವಿಟ್ಟು ಇನ್ನು ಕೆಲವು ದಿನ ಈ ಮನೆಯಲ್ಲಿರಗೊಡದಿದ್ದರೆ ನಾನು ಎಲ್ಲಿಗೆ ಹೋಗಲಿ? ಇದರ ಚಿಂತೆಯೇ ನನಗೆ!"

"ಈ ಮಾತಿಗೆ ನಾನು ಉತ್ತರವೀಯಬೇಕೆ? ನಿಮ್ಮ ಅಣ್ಣಂದಿರು ಎಲ್ಲಿರುವರು?"

"ಎಲ್ಲಿರುವರೋ, ನನಗೆ ಗೊತ್ತಿಲ್ಲ. ತಾವು ಎಲ್ಲಿ ಸಿಟ್ಟಾಗುವಿರೊ ಎಂಬ ಭಯದಿಂದ ನಾನು ಇದು ವರೆಗೆ ತಮಗೆ ಭೆಟ್ಟಿಯಾಗಲಿಲ್ಲ" ಎಂದು ಸ್ವಲ್ಪ ಹೊತ್ತು ಸುಮ್ಮನಾಗಿ, ತನ್ನನ್ನು ಸಂಬಾಳಿಸಿಕೊಂಡು ಪುನಃ ಹೇಳತೊಡಗಿದಳು. "ತಾವು ಒಡೆಯರು, ತಮ್ಮೆದುರಿಗೆ ಯಾವುದನ್ನೂ ಬಚ್ಚಿಡುವುದಿಲ್ಲ, ನನ್ನ ದುಸ್ಥಿತಿಯನ್ನು ತಮ್ಮೆದುರಿನಲ್ಲಿ ಬಿಚ್ಚಿ ಹೇಳಿರುವೆ. ಇಲ್ಲಿ ಒಂದು ದಿನವೂ ನಾನು ಒತ್ತಾಯದಿಂದ—ಅಧಿಕಾರದಿಂದ ಇರಬಯಸುವುದಿಲ್ಲ. ಸ್ವಲ್ಪ ದಿನಗಳಲ್ಲಿಯೇ ಹೊರಟು ಹೋಗುವೆ."

ಆಕೆಯ ದನಿಯಿಂದಲೇ ಆಕೆಯ ಕಣ್ಣುಗಳಲ್ಲಿ ನೀರು ಬಂದಿವೆಯೆಂಬದು ಹೊರಗಿದ್ದ ವಿಜಯನಿಗೆ ತಿಳಿಯಿತು. ವಿಜಯ ದುಃಖಿತನಾದ ಮತ್ತು ಮನದಲ್ಲೇ ಸಂತುಷ್ಟನೂ ಆದ. ಈ ಮನೆಯನ್ನು ವಶಕ್ಕೆ ತೆಗೆದುಕೊಳ್ಳಲು ಎಷ್ಟು ಕಷ್ಟಪಡಬೇಕಾಗುವುದೋ ಎಂದು ವಿಜಯ ತಿಳಿದುಕೊಂಡಿದ್ದ. ಆದರೆ ಅದಾವುದೂ ಆಗಲಿಲ್ಲ. ಆಕೆಯ ಕಂಬನಿಗಳ ಮುಖಾಂತರ ಬಿಕ್ಕೆ ಬೇಡಿದಳು. ಅವನ ಜೇಬಿನಲ್ಲಿರುವ ಪಿಸ್ತೂಲು ಮತ್ತು ಆಳುಮಕ್ಕಳ ಕೈಯಲ್ಲಿದ್ದ ಲಾಠಿಗಳು ಅವನನ್ನು ಒಳಗೊಳಗೇ ಧಿಕ್ಕರಿಸ

ತೊಡಗಿದುವು. ಆದರೇನು, ಅವನು ತನ್ನ ದೌರ್ಬಲ್ಯವನ್ನು ಹೊರಗೆ ತೋರ ಗೊಡುವಂತಿರಲಿಲ್ಲ. ಅವನೆಂದ "ಇಲ್ಲಿ ಇರಗೊಡಲು ಅಡ್ಡಿಯೇನೂ ಇಲ್ಲ ಆದರೆ ಮನೆಯು ನನಗಿರಲು ಬೇಕಾಗಿದೆ. ಈಗಿದ್ದ ಸ್ಥಳದಲ್ಲಿ ಇರಲು ಬಹಳ ತೊಂದರೆಯಾಗುತ್ತಿದೆ. ಅಲ್ಲದೆ ನಮ್ಮ ಮನೆಯ ಹೆಂಗಸರೂ ಇಲ್ಲಿಗೊಂದು ಬಾರಿ ನೋಡಲು ಬರಬೇಕೆಂದಿರುವರು."

"ಬಹಳ ಒಳ್ಳೇದು; ಬರಲಿ, ಹೊರಗಿನ ಕೋಣೆಯಲ್ಲಿ ತಾವು ಸುಖ ವಾಗಿ ಇರಬಹುದು; ಮೇಲೆ ಅಟ್ಟದ ಮೇಲೆ ಬೇಕಾದಷ್ಟು ಕೋಣೆಗಳು ಇವೆ ಹೆಂಗಸರೂ ಸುಖವಾಗಿ ಇರಬಹುದು. ಯಾವ ತೊಂದರೆಯೂ ಆಗು ವುದಿಲ್ಲ. ಈ ಪರಸ್ಥಳದಲ್ಲಿ ಅವರಿಗೆ ಇಲ್ಲಿಯ ಒಬ್ಬ ಪರಿಚಿತರು ಬೇಕು ನಾನು ಅವರಿಗೆ ಸಾಕಷ್ಟು ಸಹಾಯ ಮಾಡಬಯಸುವೆ"

ಈ ಬಾರಿ ವಿಜಯ ನಾಚಿಕೆಪಟ್ಟು ಸ್ವಲ್ಪ ಆಕ್ಷೇಪಣೆಯನ್ನು ತೋರಿ ಸುತ್ತ "ಬೇಡ, ಬೇಡ. ಹೀಗೆಲ್ಲಾದರೂ ಆಗುವುದೆ! ಅವರ ಕೂಡ ದಾಸ ದಾಸಿಯರು ಬರುವರು. ನಿಮಗೆ ಏನನ್ನೂ ಮಾಡಬೇಕಾಗುವುದಿಲ್ಲ. ಆದರೆ ನಾನು ಒಳಗಿನ ಕೋಣೆಗಳನ್ನು ಕೊಂಚ ನೋಡಬಹುದೇ?" ಎಂದ.

"ನೋಡಬಹುದು. ಇದು ತಮ್ಮದೇ ಮನೆ. ಬನ್ನಿರಿ."

ಒಳಗೆ ಹೋಗಿ ವಿಜಯ ಆಕೆಯ ಮುಖವನ್ನು ಕ್ಷಣಮಾತ್ರ ನೋಡಿದ. ಸೆರಗು ಸ್ವಲ್ಪ ಹಣೆಯ ವರೆಗೂ ಬಂದಿದೆ, ಮುಸುಕು ಇಲ್ಲ. ಮೈಮೇಲೆ ಸ್ವಲ್ಪ ಮಾಸಿದ ಸೀರೆ. ಆಭರಣಗಳು ಏನೂ ಇಲ್ಲ, ಕೈಯಲ್ಲಿ ಹಳೆಯ ಕಾಲದ ಎರಡು ಚಿನ್ನದ ಬಳೆಗಳು ಮಾತ್ರ ಇವೆ. ಮರೆಯೊಳಗಿಂದ ಬಂದ ಆ ಅಶ್ರು ಪೂರಿತ ದನಿಯು ವಿಜಯನಿಗೆ ಬಹು ಇಂಪಾಗಿ ಕೇಳಿಸಿತ್ತು. ಆಕೆಯೂ ಹಾಗೆಯೆ ಇರಬಹುದೆಂದು ಅವನಿಗೆನಿಸಿದ್ದಿತು. ವಿಶೇಷವಾಗಿ ಆಕೆಯು ಬಡವೆ ಯಾದರೂ ದೊಡ್ಡವರ ಮನೆಯ ಮಗಳು. ಆದರೆ ಅವನು ಆಶಿಸಿದಂತೆ ಆಕೆಯು ಇರಲಿಲ್ಲ. ಬಣ್ಣ ಕೆಂಪು ಇಲ್ಲ, ತಿಕ್ಕಿ ತೊಳೆದ ಸಾಗದಪ್ಪು, ಇನ್ನೂ ಸ್ವಲ್ಪ ಕಪ್ಪಿನ ಕಡೆಗೆ ಒಲೆದುದೇ ಎಂದು ಹೇಳಬಹುದು ಹಳ್ಳಿಯ ಹುಡುಗಿ ಯರು ಕಾಣುವಂತಿರುವಳು. ದೇಹ ಸ್ವಲ್ಪ ಬಡಕ, ಆದರೆ ಹುರಿಕಟ್ಟಿನದು; ಕುಳಿತು ಹೊತ್ತುಗಳೆದ ಮೈಯಲ್ಲವೆಂದು ಹೇಳುವಂತಿದ್ದಿತು. ಒಂದು ವಿಶೇಷತೆ ಯಿದ್ದಿತು ಹಣೆಯ ಮೇಲೆ—ಆಶ್ಚರ್ಯಕಾರಕ ನಿರ್ದೋಷಸುಂದರ ಕಾಂತಿ.

ಆಕೆಯೆಂದಳು "ವಿನೋದಣ್ಣ, ನೀನು ಬಾಬೂಸಾಹೇಬರಿಗೆ ಮನೆಯನ್ನು ಸ್ವಲ್ಪ ತೋರಿಸಿಕೊಂಡು ಬಾ, ನಾನು ಅಡುಗೆಮನೆಯಲ್ಲಿರುವೆ."

"ನೀನು ಜೊತೆಯಲ್ಲಿ ಇರುವುದಿಲ್ಲವೆ ರಾಧಾಜೀಜೀ ?"

"ಇಲ್ಲ."

ಮೇಲೆ ಹೋಗಿ ವಿಜಯ ಎಲ್ಲವನ್ನೂ ನೋಡಿದ. ಅನೇಕ ಕಿರುಮನೆಗಳಿವೆ. ಹಳೆಯ ಕಾಲದ ಎಷ್ಟೋ ಸಾಮಾನುಗಳು ಹಾಗೆಯೆ ಬಿದ್ದಿವೆ. ಕೆಲವು ಒಡೆದಿವೆ, ಮುರಿದಿವೆ, ಕೆಲವು ಒಡೆಯುವ ಮುರಿಯುವ ಮಾರ್ಗದಲ್ಲಿವೆ. ಈಗ ಅವುಗಳ ಬೆಲೆ ಹೆಚ್ಚು ಇಲ್ಲ, ಆದರೆ ಒಂದಾನೊಂದು ಕಾಲದಲ್ಲಿ ಹೆಚ್ಚು ಇರಬಹುದು. ಹೊರಗಿದ್ದ ಕೋಣೆಗಳಂತೆಯೆ ಇವೂ ಬೀಳಲಾಗಿವೆ. ಬಡತನದ ಬಣ್ಣ ದಟ್ಟವಾಗಿ ಹತ್ತಿದೆ ಎಲ್ಲ ವಸ್ತುಗಳ ಮೇಲೆ.

ವಿಜಯ ಕೆಳಗಿಳಿದು ಬಂದ ಬಳಿಕ ಅನುರಾಧೆಯು ಅಡುಗೆಮನೆಯ ಬಾಗಿಲ ಬಳಿ ಬಂದು ನಿಂತಳು. ಕೆಟ್ಟ ಪರಿಸ್ಥಿತಿಯಲ್ಲಿದ್ದರೂ ದೊಡ್ಡವರ ಮನೆತನದ ಹೆಣ್ಣುಮಗಳಾದುದರಿಂದ ಆಕೆಯನ್ನು 'ನೀವು' ಎಂದು ಸಂಬೋಧಿಸಲು ಸಂಕೋಚಪಟ್ಟು "ತಾವು ಈ ಮನೆಯಲ್ಲಿ ಎಷ್ಟು ದಿನ ಇರಬಯಸುವಿರಿ ?" ಎಂದು ಕೇಳಿದ ವಿಜಯ.

"ಸರಿಯಾಗಿ ಇಷ್ಟೇ ದಿನ ಇರುವೆನೆಂದು ಹೇಳಲು ಬರುವುದಿಲ್ಲ. ಎಷ್ಟು ದಿವಸ ತಾವು ದಯೆಯಿಟ್ಟು ಇರಗೊಡುವಿರೊ ಅಷ್ಟು ದಿನ."

"ಕೆಲವು ದಿವಸ ಇರಗೊಡಬಲ್ಲೆ; ಹೆಚ್ಚು ದಿವಸ ಕೊಡಲಾರೆ. ಆಗ ತಾವು ಎಲ್ಲಿಗೆ ಹೋಗುವಿರಿ ?"

"ಇದನ್ನೇ ಹಗಲೂ ರಾತ್ರಿ ಯೋಚಿಸುತ್ತಿರುವೆ."

"ತಾವು ಗಗನನ ವಿಳಾಸವನ್ನು ಬಲ್ಲಿರೆಂದು ಜನರು ಹೇಳುವರು."

"ಅವರು ಮತ್ತೇನೇನನ್ನು ಹೇಳುವರು ?"

ವಿಜಯ ಈ ಮಾತಿಗೆ ಉತ್ತರವೀಯದಾದ. ಅನುರಾಧೆಯು ಎನ್ನತೊಡಗಿದಳು. "ನನಗೆ ಗೊತ್ತಿಲ್ಲವೆಂದು ಮೊದಲೇ ಹೇಳಿಬಿಟ್ಟಿರುವೆ. ಆದರೆ ಗೊತ್ತಿದ್ದರೂ ಕೂಡ ಅಣ್ಣನನ್ನು ಹಿಡಿಸಿಕೊಡಬೇಕೇನು ನಾನು ? ಇದೇ ಏನು ತಮ್ಮ ಆಜ್ಞೆ ?"

ಆಕೆಯ ದನಿಯಲ್ಲಿ ತಿರಸ್ಕಾರದ ಚುರುಕು ಇದ್ದಿತು. ವಿಜಯ

ಅತ್ಯಂತ ನಾಚಿಕೆಪಟ್ಟುಕೊಂಡ. ಅಭಿಜಾತ್ಯದ ಮುದ್ರೆ ಇನ್ನೂ ಈಕೆಯ ಮನದ ಮೇಲಿಂದ ಹೋಗಿಲ್ಲೆಂಬದು ವಿಜಯನಿಗೆ ತಿಳಿಯಿತು. ಅವನೆಂದ "ಇಲ್ಲ; ಅದಕ್ಕಾಗಿ ನಾನು ಹಾಗೆ ಹೇಳಲಿಲ್ಲ. ಸಾಧ್ಯವಾದರೆ ನಾನೇ ಅವನನ್ನು ಹುಡುಕಿ ಗೊತ್ತು ಹಚ್ಚುವೆ, ಓಡಿ ಹೋಗಲು ಬಿಡುವುದಿಲ್ಲ. ಆದರೆ ಇನ್ನೊಂದು ವಿಷಯ—ಇಷ್ಟು ದಿನಗಳಿಂದ ಅವನು ನಮ್ಮ ಸರ್ವನಾಶವನ್ನು ಮಾಡಿದುದೂ ತಮಗೆ ಗೊತ್ತಿಲ್ಲವೆಂದು ಹೇಳಬಯಸುವಿರೇನು ?"

ಯಾವ ಉತ್ತರವೂ ಬರಲಿಲ್ಲ ವಿಜಯ ಎನ್ನತೊಡಗಿದ "ಜಗತ್ತಿನಲ್ಲಿ ಕೃತಜ್ಞತೆ ಎಂಬುದೊಂದು ಗುಣವಿದೆ. ತಾವು ತಮ್ಮ ಅಣ್ಣನಿಗೆ ಈ ವಿಷಯವಾಗಿ ಸಲಹೆಯನ್ನು ಒಂದು ದಿನವಾದರೂ ಕೊಡಲಿಲ್ಲವೆ ? ನನ್ನ ತಂದೆಯವರು ಬಹಳ ಸರಳ ಸ್ವಭಾವದವರು. ತಮ್ಮ ಕುಲ-ವಂಶದ ಬಗ್ಗೆ ಅವರಲ್ಲಿ ಮಹತ್ವವಿದೆ, ವಿಶ್ವಾಸವೂ ಇದ್ದಿತು. ಆದುದರಿಂದಲೇ ಗಗನಬಾಬುಗಳಿಗೆ ಎಲ್ಲವನ್ನೂ ಒಪ್ಪಿಸಿದ್ದರು. ಅದಕ್ಕೆ ಅದೇ ಏನು ಪ್ರತ್ಯುಪಕಾರ ? ನಾನು ದೇಶದಲ್ಲಿ ಇದ್ದಿದ್ದರೆ ಹೀಗೆಂದಿಗೂ ಆಗಗೊಡುತ್ತಿರಲಿಲ್ಲವೆಂಬದನ್ನು ತಾವು ನಿಶ್ಚಯವಾಗಿ ತಿಳಿದುಕೊಳ್ಳಿ."

ಅನುರಾಧೆಯು ಮೊದಲಿನಂತೆ ಸುಮ್ಮನೇ ಇದ್ದಳು. ವಿಜಯ ಎನ್ನತೊಡಗಿದ "ಇವೊತ್ತಿನಿಂದ ಇಡಿ ಮನೆಯು ನನ್ನ ವಶಕ್ಕೆ ಬಂದಿದೆ. ಇಡೀ ಮನೆಯು ಸ್ವಚ್ಛವಾದ ಬಳಿಕ ನಾನು ಇಲ್ಲಿಗೇ ಬಂದು ಹೊರಗಿನ ಕೋಣೆಗಳಲ್ಲಿ ಇರುವೆ; ಹೆಂಗಸರು ಆ ಮೇಲೆ ಬರುವರು. ತಾವು ಕೆಳಗಿನ ಒಂದು ಕೋಣೆಯಲ್ಲಿ ಇರ್ರಿ. ಎಲ್ಲಿಯು ವರೆಗೆ ತಮಗೆ ಬೇರೊಂದು ಸ್ಥಳವು ಸಿಕ್ಕುವುದಿಲ್ಲವೋ ಅಲ್ಲಿಯ ವರೆಗೆ ಇರ್ರಿ. ಆದರೆ ಇಲ್ಲಿಂದ ಒಂದು ವಸ್ತುವನ್ನಾದರೂ ಬೇರೆಡೆಗೆ ಸಾಗಿಸುವ ಪ್ರಯತ್ನವನ್ನು ಮಾತ್ರ ಮಾಡಬೇಡಿರಿ."

ಇಷ್ಟರಲ್ಲಿ ಕುಮಾರನೆಂದ "ಅಪ್ಪಾ ಬಾಯಾರಿಕೆಯಾಗಿದೆ, ನೀರು ಬೇಕು ಕುಡಿಯಲಿಕ್ಕೆ."

"ಇಲ್ಲಿ ಎಲ್ಲಿರುವುದೋ ನೀರು ?"

ಅನುರಾಧೆಯು ಸನ್ನೆಮಾಡಿ ಅವನನ್ನು ತನ್ನ ಬಳಿಗೆ ಕರೆದು ಅಡುಗೆಯ ಮನೆಯೊಳಗೆ ಕರೆದುಕೊಂಡು ಹೋಗಿ "ಸೀಯಾಳ ಇದೆ, ಕುಡಿಯುವೆಯೇನು ಮಗು ?" ಎಂದಳು.

"ಹೂ, ಕುಡಿಯುವೆ."

ಸಂತೋಷ ತೆಂಗಿನಕಾಯನ್ನು ಕೊಯ್ದು ಕೊಟ್ಟ; ಕುಮಾರ ಎಳೆ ನೀರನ್ನು ಕುಡಿದ ಎಳೆಕೊಬ್ಬರಿಯನ್ನು ತಿಂದು ಹೊರಗೆ ಬಂದು ತಂದೆಗೆ ಎಂದ "ಅಪ್ಪಾ, ಎಳೆ ನೀರನ್ನು ನೀನೂ ಕುಡಿಯುವೆಯೇನು ? ಬಹಳ ಸೀ ಇದೆ."

"ಇಲ್ಲ."

"ಕುಡಿಯಲ್ಲೊ ಅಪ್ಪಾ, ಬಹಳ ಇವೆ. ನಮ್ಮವೇ ಎಲ್ಲವೂ "

ಮಾತು ಅಂತಹುದೇನೂ ಇರಲಿಲ್ಲ. ಆದಾಗ್ಯೂ ಇಷ್ಟು ಜನರ ನಡುವೆ ಹುಡುಗನ ಬಾಯಿಂದ ಬಂದ ಇಂತಹ ಮಾತನ್ನು ಕೇಳಿ ಅನಸು ಸ್ವಲ್ಪ ಲಜ್ಜಿತನಾಗಿ ಎಂದ "ಇಲ್ಲ, ಕುಡಿಯುವುದಿಲ್ಲ. ನೀನು ನಡೆ."

---



ಬಾಬುಗಳ ಮನೆಯನ್ನು ತನ್ನ ಅಧಿಕಾರಕ್ಕೆ ಒಳಪಡಿಸಿಕೊಂಡು ವಿಜಯ ಹೊರಗಿನ ಕೋಣೆಗಳಲ್ಲಿ ತಮ್ಮ ತಳವೂರಿದ. ಎರಡು ಕೋಣೆಗಳಲ್ಲಿ ತಾನು ಇರುತ್ತಿದ್ದ. ಉಳಿದ ಕೋಣೆಗಳಲ್ಲಿ ಕಚೇರಿಯನ್ನು ಪ್ರಾರಂಭಿಸಿದ. ವಿನೋದಘೋಷ ಮೊದಲು ಜಮೀನುದಾರಿಕೆಯಲ್ಲಿ ಕೆಲಸ ಮಾಡಿ ಸ್ವಲ್ಪ ಅನುಭವ ಪಡೆದುದರಿಂದ ಹೊಸ ಕೆಲಸಗಾರನಾಗಿ ನಿಯಮಿಸಲ್ಪಟ್ಟ ಆದಾಗ್ಯೂ ತೊಂದರೆಯು ತಪ್ಪಲಿಲ್ಲ. ಇದಕ್ಕೆ ಮುಖ್ಯ ಕಾರಣವೇನೆಂದರೆ ಗಗನ ಚಟರ್ಜಿಯು ಹಣವನ್ನು ವಸೂಲು ಮಾಡಿ ಆಗಿಂದಾಗ್ಗೆ ರಸೀದಿ ಯನ್ನು ಕೊಡುವುದು ಅಪಮಾನಕರವಾದುದೆಂದು ತಿಳಿಯುತ್ತಿದ್ದ. ಏಕೆಂದರೆ ಅದರಿಂದ ಅವಿಶ್ವಾಸದ ವಾಸನೆ ಬರುವುದು; ಚಟರ್ಜಿ ಮನೆತನಕ್ಕದು ಗೌರ ವದ ಸಂಗತಿಯಾಗುವುದಿಲ್ಲ. ಆದುದರಿಂದ ಅವನು ಅಂತರ್ಧಾನನಾದ ಬಳಿಕ ಪ್ರಜೆರು ತೊಂದರೆಯಲ್ಲಿ ಸಿಲುಕಿರುವರು—ಬಾಯಿ ಪ್ರಮಾಣಗಳನ್ನು ಸಾಕ್ಷಿಗಳನ್ನು ತೆಗೆದುಕೊಂಡು ಬರುತ್ತಿರುವರು; ಅತ್ತ ಕರೆದು ಹೇಳುಕೊಳ್ಳು ವರು ಎಷ್ಟು ಕೊಟ್ಟಿರುವರು, ಎಷ್ಟು ಬಾಕಿ ಇರುವುದು ಎಂಬುದು ಜಟಿಲ ಸಮಸ್ಯೆಯಾಗಿರುವುದು. ವಿಜಯ ಆದಷ್ಟು ಬೇಗ ಕಲಕತ್ತೆಗೆ ತಿರುಗಿ ಹೋಗಬೇಕೆಂದು ಬಂದಿದ್ದ, ಆದರೆ ಹೋಗಲು ಆಗಲಿಲ್ಲ. ಇವೊತ್ತು, ನಾಳೆ ಎನ್ನುತ್ತ ಹತ್ತು ಹನ್ನೆರಡು ದಿನಗಳು ಕಳೆದು ಹೋದವು.

ಇತ್ತ ಕುಮಾರನ ಗೆಳೆತನ ಸಂತೋಷನ ಕೂಡ ಬೆಳೆದುಬಿಟ್ಟಿತು. ವಯಸ್ಸಿನಿಂದ ಅವನು ಚಿಕ್ಕವನಿದ್ದರೂ ತನ್ನ ಸಮಾಜ ಮತ್ತು ಮನೆಯಿಂದ ದೂರ ಇರುವುದರಿಂದ ಮತ್ತು ಬೇರೊಬ್ಬ ಗೆಳೆಯ ದೊರೆಯದ ಮೂಲಕ ಸಂತೋಷನ ಕೂಡ ಬೆರೆತು ಹೋಗಿರುವ ಅವನೊಡನೇ ಇರುವ ಮನೆಯಲ್ಲಿ. ತೋಟಪಟ್ಟಿ, ನದಿಕೆರೆ, ಗದ್ದೆ ತಿರುಗಾಡುವ; ಮಾವಿನಕಾಯಿ ಮತ್ತು ಹಕ್ಕಿಗಳ ಗೂಡುಗಳನ್ನು ಹುಡುಕುತ್ತ ಅಲೆದಾಡುವ. ಸಂತೋಷನ ಚಿಕ್ಕಮ್ಮನ ಮನೆಯಲ್ಲೆ ಊಟ ಮಾಡುವ. ತಾನೂ ಆಕೆಯನ್ನು 'ಚಿಕ್ಕಮ್ಮ' ಎಂದು ಸಂಬೋಧಿಸುವ. ವಿಜಯ ದುಡ್ಡಿನ ಲೆಕ್ಕಪತ್ರದ ಗೊಂದಲದಲ್ಲಿ ಬಿದ್ದಿರುವುದರಿಂದ ಮಗನ ಕಡೆಗೆ ಗಮನ ಕೊಡಲು ಅಸಮರ್ಥನಾಗಿರುವ. ಅವನಿಗೆ ಬಿಡುವು ದೊರೆತಾಗ ಮಗನ ಪತ್ತೆಯೇ ಇರುವುದಿಲ್ಲ. ಒಮ್ಮೊಮ್ಮೆ ಬೆದರಿಸಿ ಬಳಿಯಲ್ಲಿ ಕುಳ್ಳಿರಿಸಿಕೊಂಡಿರುವ. ಆದರೆ ಸ್ವಲ್ಪ ಅನುವು ದೊರೆಯುತ್ತಲೇ ಮನೆಯಲ್ಲಿ ಹೊಕ್ಕು ಚಿಕ್ಕಮ್ಮನ ಅಡುಗೆ ಮನೆಯನ್ನು ಸೇರುವ. ಸಂತೋಷನ ಕೂಡ ಮಧ್ಯಾಹ್ನ ಹುಳಿ ಅನ್ನ ಉಣ್ಣುವ; ಸಾಯಂಕಾಲಕ್ಕೆ ರೊಟ್ಟಿ ಮತ್ತು ಕೊಬ್ಬರಿಯ ಉಂಡೆಯನ್ನು ತಿನ್ನುವ.

ಆ ದಿನ ಸಾಯಂಕಾಲ ಜನರು ಬಂದಿರಲಿಲ್ಲ. ವಿಜಯ ಚಹಾ ಕುಡಿದು ಚುರೂಟನ್ನು ಹೊತ್ತಿಸುತ್ತ ನದಿಯ ದಂಡೆಯ ಮೇಲೆ ತಿರುಗಾಡಿ ಬರಬೇಕೆಂದು ಯೋಚಿಸಿದ. ಮಗನು ಕಾಣಿಸಲಿಲ್ಲ. ಅಕಸ್ಮಾತ್ ಅವನ ನೆನಹು ಬಂದಿತು. ಸೇವಕನು ನಿಂತಿದ್ದ, ಅವನನ್ನು ವಿಜಯ ವಿಚಾರಿಸಿದ 'ಕುಮಾರ ಎಲ್ಲಿದ್ದಾನೋ ?'

ಅವನು ಸನ್ನೆ ಮಾಡಿ 'ಒಳಗೆ' ಎಂದ.

'ರೊಟ್ಟಿಯನ್ನು ಇವೊತ್ತು ತಿಂದಿದ್ದನೇನು ?'

'ಇಲ್ಲ.'

'ಒತ್ತಾಯದಿಂದ ಹಿಡಿದು ತಿನ್ನಿಸುವುದಿಲ್ಲವೇಕೆ ?' 'ಇಲ್ಲಿಯ ಊಟ ಅವನಿಗೆ ಸೇರುವುದಿಲ್ಲ. ಸರಕಾರ! ಕೋಪಿಸಿಕೊಂಡು ತಟ್ಟೆಯನ್ನು ದೂರ ಸರಿಸಿಬಿಡುವ.'

'ನಾಳೆಯಿಂದ ನನ್ನೊಡನೆ ಅವನನ್ನು ಊಟಕ್ಕೆ ಕುಳ್ಳಿರಿಸು' ಎಂದು ತಿರುಗಾಡಲು ಹೋಗುವುದನ್ನು ಬಿಟ್ಟು ಅದೇನನ್ನೋ ಯೋಚಿಸಿ ಮನೆ

ಯೊಳಕ್ಕೆ ಹೋದ. ದೊಡ್ಡ ಒಳಅಂಗಳದ ಆಚೆಯ ತುದಿಯಿಂದ ಕುಮಾರನ ದನಿಯು ಬಂದಿತು. 'ಚಿಕ್ಕಮ್ಮ, ಒಂದು ರೊಟ್ಟಿ, ಎರಡು ಕೊಬ್ಬರಿಯ ಉಂಡೆ! ಬೇಗ!'

ಯಾರಿಗೆ ಆವನು ಆಜ್ಞೆಯನ್ನಿತ್ತನೋ ಆಕೆಯು 'ಇಳಿದು ಬಾ ಮಗೂ. ನಿಮ್ಮಂತೆ ನಾನು ಮರವೇರಬಲ್ಲೆನೇ ?' ಎಂದು ಉತ್ತರವಿತ್ತಳು.

'ಏರಬಲ್ಲೆ ಚಿಕ್ಕಮ್ಮ, ಕಷ್ಟವೇನೂ ಇಲ್ಲ. ಆ ದಪ್ಪಗಿರುವ ಟೊಂಗೆಯ ಮೇಲೆ ಕಾಲಿಟ್ಟು ಈ ಚಿಕ್ಕ ಟೊಂಗೆಯನ್ನು ಹಿಡಿದು ಏರಿದರೆ ಕೂಡಲೆ ಹತ್ತಿ ಬಿಡುವೆ.'

ವಿಜಯ ಹತ್ತಿರ ಹೋಗಿ ನಿಂತ. ಅಡುಗೆಯ ಮನೆಯ ಬಳಿ ಒಂದು ದೊಡ್ಡ ಮಾವಿನ ಮರವಿದೆ, ಆದರ ದೊಡ್ಡ ಟೊಂಗೆಯ ಮೇಲೆ ಕುಮಾರರು ಸಂತೋಷ ಕುಳಿತುಕೊಂಡು ಕಾಲು ಇಳಿಬಿಟ್ಟು ಮತ್ತು ಬೆನ್ನನ್ನು ಬೊಡ್ಡಿಗೆ ಆನಿಸಿ ರೊಟ್ಟಿ ಮತ್ತು ಉಂಡೆ ತಿನ್ನುತ್ತಿರುವರು. ವಿಜಯನನ್ನು ನೋಡುತ್ತಲೇ ಇಬ್ಬರೂ ಗಾಬರಿಯಾದರು. ಅನುರಾಧೆಯು ಅಡುಗೆಮನೆಯ ಬಾಗಿಲ ಮರೆಯಲ್ಲಿ ನಿಂತಳು.

'ಇದೇ ಏನು ಇವರ ಊಟದ ಸ್ಥಳ ?'

ಯಾರೂ ಉತ್ತರವೀಯಲಿಲ್ಲ. ವಿಜಯ ಒಳಗಿನವಳನ್ನು ಉದ್ದೇಶಿಸಿ ಎನ್ನತೊಡಗಿದ 'ತಮ್ಮ ಮೇಲೆ ಬಹಳ ಒತ್ತಾಯ-ಜುಲುಮೆ ಮಾಡುವ ಎಂದು ತೋರುತ್ತದೆ.'

ಈ ಬಾರಿ ಕೋಮಲ ದನಿಯಿಂದ ಅನುರಾಧೆಯು ಉತ್ತರವಿತ್ತಳು— "ಹೌದು."

'ಆದಾಗ್ಯೂ ತಾವು ತಲೆಗೇರಿಸಿಕೊಳ್ಳಲು ಹಿಂದು ಮುಂದು ನೋಡುವುದಿಲ್ಲ. ಇಷ್ಟೇಕೆ ತಲೆಗೇರಿಸಿಕೊಳ್ಳುತ್ತಿರುವಿರಿ ?'

"ಏರಿಸಿಕೊಳ್ಳದಿದ್ದರೆ ಇನ್ನೂ ಗಲಾಟೆ ಮಾಡುವರೆಂಬ ಭಯದಿಂದ"

'ಆದರೆ ಮನೆಯಲ್ಲಿ ಹೀಗೆ ಗಲಾಟೆ ಮಾಡುವುದಿಲ್ಲ.'

'ಇರಬಹುದು. ಅವನಿಗೆ ತಾಯಿಯಿಲ್ಲ, ಅಜ್ಜಿ ಕಾಯಿಲೆಯವಳು. ತಂದೆ ಯಾವಾಗಲೂ ಕೆಲಸದಲ್ಲಿ ತೊಡಗಿರುವರು. ಗಲಾಟೆ ಮಾಡುವುದು, ಕಾಡಿಸುವುದು ಯಾರನ್ನು ?'

ವಿಜಯನಿಗೆ ಈ ಮಾತು ಗೊತ್ತಿರಲಿಲ್ಲವೆಂತಲ್ಲ, ಆದರೂ ಮಗುವಿಗೆ ತಾಯಿಯಿಲ್ಲ ಎಂಬ ಮಾತನ್ನು ಬೇರೊಬ್ಬರಿಂದ ಕೇಳಿದ ಬಳಿಕ ಅವನಿಗೆ ಸ್ವಲ್ಪ ದುಃಖವಾಯಿತು. ಅವನೆಂದ "ತಮಗೆ ಸಾಕಷ್ಟು ಗೊತ್ತಾಗಿರುವಂತೆ ತೋರು ವುದು. ಯಾರು ಹೇಳಿದರು ? ಕುಮಾರನೆ ?"

ಅನುರಾಧೆಯೆಂದಳು 'ಹೇಳುವಷ್ಟು ಅವನಿಗೆ ವಯಸ್ಸಾಗಿಲ್ಲ. ಆದಾಗ್ಯೂ ಅವನ ಬಾಯಿಂದಲೇ ಕೇಳಿರುವೆ. ನಾನು ಇವರನ್ನು ಮಧ್ಯಾಹ್ನ ಬಿಸಿಲಲ್ಲಿ ಹೊರಗೆ ಬಿಡುವುದಿಲ್ಲ. ಆದರೂ ಕಣ್ಣು ತಪ್ಪಿಸಿ ಹೋಗುವರು. ಹೋಗದೆ ಇದ್ದ ದಿನ ಕುಮಾರ ನನ್ನ ಬಳಿಯಲ್ಲಿ ಮಲಗಿಕೊಂಡು ಮನೆಯ ಮಾತುಗಳನ್ನು ಹೇಳುವ.'

ವಿಜಯ ಆಕೆಯ ಮುಖವನ್ನು ನೋಡಲಿಲ್ಲ. ಆದರೆ ಆಕೆಯ ದನಿ ಮೊದಲಿನ ದಿನದಂತೆಯೆ ಇಂದೆಯೂ ಅತ್ಯಂತ ಇಂಪಾಗಿ ಕೇಳಿತು. ಅವನು ಮಾತನಾಡಬೇಕೆಂದು ಮಾತನಾಡದೆ ಆಕೆಯಿಂದ ಕೇಳುವುದಕ್ಕಾಗಿ 'ಇನ್ನು ಮನೆಗೆ ಹೋದ ಬಳಿಕ ಅವನು ತೊಂದರೆಪಡಬೇಕಾಗುವದು' ಎಂದ.

"ಅದೇಕೆ ?"

'ಗಲಾಟೆ ಮಾಡುವುದು ಬಾಲ್ಯದ ಒಂದು ಬಗೆಯ ಹಟ. ಅದನ್ನು ಮಾಡದಿದ್ದರೆ ಮನಸ್ಸಿಗೆ ನೆಮ್ಮದಿಯಾಗುವುದಿಲ್ಲ; ಆಲಸ್ಯ-ತಾಮಸಿತನವು ಬರುವುದು ಅಲ್ಲದೆ ಅಲ್ಲಿ ಅವನಿಗೆ ಗಲಾಟೆ ಮಾಡಲಿಕ್ಕೆ ಸಾಮಾನುಗಳನ್ನು ಒದಗಿಸಿಕೊಡುವವರಾರು ? ಎರಡೇ ದಿನಗಳಲ್ಲಿ ಓಡಿಹೋಗಬಯಸಬಹುದು.'

ಅನುರಾಧೆಯು ಮೆಲ್ಲಗೆ 'ಇಲ್ಲ, ಇಲ್ಲ. ಮರೆತುಬಿಡುವ—ಕುಮಾರ, ಇಳಿದು ಬಾ ಮಗೂ, ರೊಟ್ಟಿಯನ್ನು ತೆಗೆದುಕೊಂಡು ಹೋಗು' ಎಂದಳು.

ಕುಮಾರ ಕೈಯಲ್ಲಿ ತಟ್ಟೆಯನ್ನು ಹಿಡಿದುಕೊಂಡು ಕೆಳಗಿಳಿದು ಬಂದ. ಮತ್ತು ಚಿಕ್ಕಮ್ಮನ ಕೈಯಿಂದ ರೊಟ್ಟಿಗಳನ್ನೂ ಉಂಡೆಗಳನ್ನೂ ತೆಗೆದು ಕೊಂಡು ಆಕೆಗೆ ಹೊಂದಿಕೊಂಡು ನಿಂತು ತಿನ್ನತೊಡಗಿದ; ಮರವನ್ನೇರಲಿಲ್ಲ. ಆ ವಸ್ತುಗಳು ಮನೆತನದ ದರ್ಜೆಯ ದೃಷ್ಟಿಯಿಂದ ತುಚ್ಛವಾದವುಗಳಾಗಿ-ದ್ದರೂ ನಿಜವಾದ ಸನ್ಮಾನದ ದೃಷ್ಟಿಯಿಂದ ಇನಿತೂ ತುಚ್ಛವಿರಲಿಲ್ಲ ಎಂಬು ದನ್ನು ವಿಜಯ ಅರಿತ; ಕುಮಾರನು ಅದೇಕೆ ಇಷ್ಟು ಚಿಕ್ಕಮ್ಮನ ಅಡುಗೆಯ ಮನೆಯ ಕಡೆಗೆ ಒಲಿದಿರುವನೆಂಬುದನ್ನೂ ತಿಳಿದುಕೊಂಡ. ಮಗನು ಆ

ಬಡಪ್ರಾಣಿಗೆ ವೆಚ್ಚದ ದೃಷ್ಟಿಯಿಂದ ಭಾರವಾಗುವ ಮತ್ತು ಅವನು ಹೀಗೆ ಆ ವಸ್ತುಗಳ ಬಗ್ಗೆ ಆಸೆಬುರುಕನಾಗಿರಕೂಡದು ಎಂಬ ಮಾತುಗಳನ್ನು ಹೇಳಲು ವಿಜಯ ಬಂದಿದ್ದ, ಆದರೆ ನಡುವೆ ಒಂದು ವಿಘ್ನ ವು ಬಂದಿತು. ಕುಮಾರನೆಂದ 'ಚಿಕ್ಕಮ್ಮ, ನಿನ್ನೆ ಮಾಡಿದಂತಹ ಚಂದ್ರಪೂಲಿ* ಮಾಡಲು ಹೇಳಿದ್ದೆ, ಅವನ್ನೇಕೆ ಮಾಡಲಿಲ್ಲ ನೀನು ?'

'ಇಲ್ಲ ಮಗೂ, ಮರೆತು ಹೋಯಿತು. ಸ್ವಲ್ಪ ತಪ್ಪೂ ಆಯಿತು. ಬೆಕ್ಕು ಕಣ್ಣು ತಪ್ಪಿಸಿ ಹಾಲನ್ನು ಉರುಳಿಸಿ ಹೋಯಿತು. ನಾಳೆ ಹೀಗೆ ಆಗಲಿಕ್ಕಿಲ್ಲ'

''ಯಾವ ಬೆಕ್ಕು ಹೇಳು ? ಬಿಳಿಯದೇನು ?"

'ಬಹುಶಃ ಅದೇ ಇರಬಹುದು' ಎಂದು ಅನುರಾಧೆಯು ಹಣೆಯ ಮೇಲೆ ಬಿದ್ದ ಕೂದಲುಗಳನ್ನು ಸರಿಪಡಿಸಕೊಳ್ಳತೊಡಗಿದಳು.

ವಿಜಯನೆಂದ 'ಅವನ ಗಲಾಟೆ ದಿನದಿನಕ್ಕೆ ಬಲವಂತ ಒತ್ತಾಯಕ್ಕೆ ಮಾರ್ಪಡುತ್ತಿರುವಂತೆ ಕಾಣುವುದು !'

ಕುಮಾರನೆಂದ 'ಕುಡಿಯುವ ನೀರೆಲ್ಲಿರುವುದು ಚಿಕ್ಕಮ್ಮಾ ?'

'ಓಹೋ ! ಮರೆತೇ ಬಿಟ್ಟೆ, ತಂದುಕೊಡುವೆ ಮಗೂ.'

'ನೀನು ಯಾವಾಗಲೂ ಮರೆತೇಬಿಡುವೆ ಚಿಕ್ಕಮ್ಮ! ನಿನಗೇನೂ ನೆನಪೇ ಉಳಿಯುವುದಿಲ್ಲ.'

ವಿಜಯನೆಂದ 'ತಮಗೆ ಬೆದರಿಕೆ ಹಾಕಲೇಬೇಕು. ಜೆಹ್ಜೆ ಹೆಜ್ಜೆಗೂ ತಪ್ಪು ಆಗುವುದು.'

'ಹೌದು' ಎಂದು ಅನುರಾಧೆಯು ನಕ್ಕಳು. ಆಕೆಯ ಅಸಾವಧಾನದಿಂದ ವಿಜಯ ಈ ನಗುವನ್ನು ನೋಡಿದ. ತನ್ನ ಈ ಮಗನ ನ್ಯಾಯವಲ್ಲದ ಕಾರ್ಯಕ್ಕಾಗಿ ಆಕೆಯಿಂದ ಕ್ಷಮೆ ಬೇಡುವುದು ದೂರ ಉಳಿದು ಹೋಯಿತು; ತಾನು ಆಡುವ ಮಾತುಗಳು ಬೇರೆ ರೂಪಧಾರಣ ಮಾಡಿಕೊಂಡು ಅವಳ ಕಿವಿಗೆ ಬಿದ್ದು ಎಲ್ಲಿ ಅಮಂಗಲಕರವಾದ ವಾತಾವರಣವನ್ನು ಹುಟ್ಟಿಸುವುವೊ ಎಂಬ ಸಂದೇಹದಿಂದ ತನ್ನ ಬಡತನವನ್ನು ಕಂಡು ಹೀಗೆ ಹೀನವಾದ ಮಾತು

---

* ಹಸಿಕೊಬ್ಬರಿಯಿಂದ ಮಾಡಿದ ಅರ್ಧಚಂದ್ರಾಕಾರದ ಒಂದು ಬಗೆಯ ಮಿಠಾಯಿ.

ಗಳನ್ನಾಡುವೆನೆಂದು ಎಲ್ಲಿ ತಿಳಿಸಿಕೊಳ್ಳುವಳೋ ಎಂಬ ಭಯದಿಂದ ಯಾವ ಮಾತನ್ನೂ ಆಡದೆ ಸುಮ್ಮಗೇ ಸ್ವಲ್ಪಹೊತ್ತು ನಿಂತು, ಬಳಿಕ ಹೊರಟುಹೋದ.

ಮರುದಿನ ಮಧ್ಯಾಹ್ನ ಅನುರಾಧೆಯು ಕುಮಾರನಿಗೂ ಸಂತೋಷನಿಗೂ ಅನ್ನವನ್ನು ನೀಡಿ ಕಾಯಿಪಲ್ಯವನ್ನು ನೀಡುತ್ತಿದ್ದಳು. ಆಗ ಆಕೆಯ ತಲೆಯ ಮೇಲಿನ ಸೆರಗು ಹಿಂದೆ ಸರಿದು ಹೋಗಿದ್ದಿತು. ಇಷ್ಟರಲ್ಲಿ ಬಾಗಿಲ ಬಳಿಯಲ್ಲಿ ಯಾರದೊ ನೆರಳು ಬಿದ್ದಂತೆ ಆಕೆಗೆ ಕಾಣಿಸಿತು. ತಲೆಯೆತ್ತಿ ನೋಡಿದಳು— ಚಿಕ್ಕ ಬಾಬುಗಳು ! ಒಮ್ಮೆಲೇ ಸಂಕೋಚಪಟ್ಟುಕೊಂಡು ಎದ್ದು ನಿಂತಳು.

ವಿಜಯನೆಂದ 'ಒಂದು ಅತ್ಯವಶ್ಯವಾದ ಸಲಹೆಯನ್ನು ಕೇಳುವುದಕ್ಕೆ ತಮ್ಮ ಬಳಿಗೆ ಬಂದಿರುವೆ. ವಿನೋದಘೋಷ ಇದೇ ಊರ ಮನುಷ್ಯ, ಅವನ ವಿಚಾರ ನಿಮಗೆ ಗೊತ್ತಿರಬಹುದು. ಅವನು ಎಂತಹ ಮನುಷ್ಯ ಎಂಬುದನ್ನು ಹೇಳಬಲ್ಲಿರಾ ? ಅವನನ್ನು ಗಣೇಶಪುರದ ಹೊಸ ಕೆಲಸಗಾರರನ್ನಾಗಿ ನಿಯಮಿಸಲಾಗಿದೆ. ಅವನ ಮೇಲೆ ಸಂಪೂರ್ಣವಾಗಿ ವಿಶ್ವಾಸವಿಡಲು ಬರುವುದೋ ಅಥವಾ ಇಲ್ಲವೊ ? ತಮ್ಮ ಅಭಿಪ್ರಾಯವೇನು ?'

ವಿನೋದ ಒಂದು ವಾರದಿಂದ ತನಗೆ ಸಾಧ್ಯವಿದ್ದಮಟ್ಟಿಗೂ ಒಳ್ಳೆಯ ಕೆಲಸವನ್ನೇ ಮಾಡುತ್ತ ಬಂದಿರುವ; ಯಾವ ರೀತಿಯಾಗಿಯೂ ಗಡಿಬಿಡಿ ಮಾಡಿಲ್ಲ. ಆದಾಗ್ಯೂ ಅವನ ವಿಷಯವನ್ನು ತಿಳಿದುಕೊಳ್ಳುವ ಸಂದರ್ಭವು ಆದೇಕೆ ಬಂದಿತೆಂಬುದು ಅನುರಾಧೆಗೆ ತಿಳಿಯದಾಯಿತು. ಆಕೆಯು ಮೃದು ಕಂಠದಿಂದ "ವಿನೋದಣ್ಣ ಏನಾದರೂ ಮಾಡಿರುವನೇನು ?" ಎಂದು ಕೇಳಿದಳು.

'ಇದು ವರೆಗೆ ಏನನ್ನೂ ಮಾಡಿಲ್ಲ. ಆದರೆ ನಾವು ಎಚ್ಚರದಿಂದ ಇರಬೇಕಾಗುದುದು ಅಗತ್ಯ.'

'ನಾನವನನ್ನು ಇದು ವರೆಗೆ ಒಳ್ಳೆಯವನೆಂದೆ ತಿಳಿಯುತ್ತ ಬಂದಿರುವೆ.'

'ನಿಜವಾಗಿಯೂ ಒಳ್ಳೆಯವನೆಂದು ತಿಳಿಯುತ್ತೀರಾ ? ನಿಂದೆ ಮಾಡಬಾರದೆಂದು ಹೀಗೆ ಹೇಳುತ್ತೀರೊ ?'

'ನಾನು ಒಳ್ಳೆಯವ, ಕೆಟ್ಟವ ಎಂದು ಹೇಳಿದರೆ ಅದಕ್ಕೆ ಬೆಲೆಯುಂಟೆ?'

'ಅದೇಕಿಲ್ಲ ! ಅವನಂತೂ ತಮ್ಮನ್ನೇ ಪ್ರಾಮಾಣಿಕ ಸಾಕ್ಷಿಯೆಂದು ತಿಳಿದು ಕುಳಿತಿರುವ.'

ಅನುರಾಧೆಯು ಸ್ವಲ್ಪ ಯೋಚಿಸಿ 'ಅವನು ಒಳ್ಳೆಯ ಮನುಷ್ಯ. ಆದರೂ ಸ್ವಲ್ಪ ದೃಷ್ಟಿಯನ್ನಿಟ್ಟಿರಿ. ನಮ್ಮ ಅಲಕ್ಷ್ಯತತನದಿಂದ ಒಳ್ಳೆಯ ಮನುಷ್ಯನೂ ಕಡುವ ಸಂಭವವುಂಟು' ಎಂದಳು.

ವಿಜಯನೆಂದ 'ಸರಿ, ನಿಜವಾದ ಮಾತೇ ಇದು. ಏಕೆಂದರೆ, ಕಾರಣ ನನ್ನು ಹುಡುಕತೊಡಗಿದಾಗ ಎಷ್ಟೋ ಕಡೆಗಳಲ್ಲಿ ಬೆರಳು ಕಚ್ಚಬೇಕಾಗುವುದು.'

ಬಳಿಕ ವಿಜಯ ತನ್ನ ಮಗನನ್ನು ಉದ್ದೇಶಿಸಿ 'ನಿನ್ನ ಭಾಗ್ಯ ಚೆನ್ನಾಗಿದೆ, ಆಕಸ್ಮಾತ್ ನಿನಗೆ ಓರ್ವ ಚಿಕ್ಕಮ್ಮ ಸಿಕ್ಕಳು; ಇಲ್ಲದಿದ್ದರೆ ಈ ಕಾಡಿನಲ್ಲಿ ಊಟವಿಲ್ಲದೆಯೆ ದಿನಗಳನ್ನು ಕಳೆಯಬೇಕಾಗುತ್ತಿದ್ದಿತು ನಿನಗೆ!' ಎಂದ.

ಅನುರಾಧೆಯು ಮೆಲ್ಲಗೆ 'ತಮಗೆ ಇಲ್ಲಿ ಊಟ-ಉಡಿಗೆಯಲ್ಲಿ ತೊಂದರೆಯಾಗುತ್ತಿರುವುದೇನು ?' ಎಂದಳು.

ವಿಜಯ ನಕ್ಕು ''ಇಲ್ಲ ಹಾಗೆಯೆ ಎಂದೆ. ಯಾವಾಗಲೂ ಪರದೇಶಗಳಲ್ಲಿಯೆ ದಿನಗಳು ಕಳೆದಿವೆ. ಊಟ-ಉಡಿಗೆಯ ತೊಂದರೆಯ ಬಗ್ಗೆ ಅಷ್ಟು ಚಿಂತೆ ಮಾಡುವ ಸ್ವಭಾವ ಇಲ್ಲ ನನ್ನದು' ಎಂದು ಹೊರಟುಹೋದ. ಅನುರಾಧೆಯು ಕಿಡಿಕೆಯ ಸಂದಿನೊಳಗಿಂದ ವಿಜಯ ಇನ್ನೂ ಸ್ನಾನ ಮಾಡಿಲ್ಲವೆಂಬುದನ್ನು ನೋಡಿದಳು.

---

ಈ ಮನೆಗೆ ಬಂದ ಬಳಿಕ ಒಂದು ಹಳೆಯ ಆರಾಮ-ಖುರ್ಚಿಯು ದೊರೆತಿದ್ದಿತು. ಒಂದು ಸಾಯಂಕಾಲ ಅದರ ಮೇಲೆ ಕುಳಿತುಕೊಂಡು ವಿಜಯ ಕಣ್ಣು ಮುಚ್ಚಿಕೊಂಡು ಚುರುಟು ಸೇದುತ್ತಿದ್ದ. ಇಷ್ಟರಲ್ಲಿ ಯಾರೋ ಒಬ್ಬರು ''ಬಾಬೂಸಾಹೇಬರೆ !" ಎಂದು ಕೂಗಿದರು. ವಿಜಯ ಕಣ್ತೆರೆದು ನೋಡಿದ. ಒಬ್ಬ ಮುದುಕ ಅವನ ಬಳಿಯಲ್ಲಿ ನಿಂತುಕೊಂಡು ಅವನನ್ನೇ ಸಂಬೋಧಿಸುತ್ತಿದ್ದ. ವಿಜಯ ಎದ್ದುನಿಂತ. ಮತ್ತೆ ಪುನಃ ಕುಳಿತ. ಬಂದ ಮುದುಕನ ವಯಸ್ಸು ಸುಮಾರು ೬೦ಕ್ಕೆ ಬಂದಿದೆ; ಆದರೆ ಕುಳ್ಳ ಶರೀರ

ಇನ್ನೂ ಗಟ್ಟಿಮುಟ್ಟ. ಮೀಸೆಗಳು ಹಣ್ಣಾಗಿ ಬೆಳ್ಳಗಾಗಿವೆ. ತಲೆಯ ಮೇಲಿನ ಕೂದಲು ಅರ್ಧಚಂದ್ರಾಕಾರದಲ್ಲಿ ಇವೆ. ಮುಂದಿನ ಒಂದೆರಡು ಹಲ್ಲುಗಳನ್ನು ಬಿಟ್ಟರೆ ಉಳಿದ ಎಲ್ಲ ಹಲ್ಲುಗಳೂ ಬಿದ್ದು ಹೋಗಿವೆ. ಮೈಮೇಲೆ ಒಂದು ಚಿಕ್ಕಿನಕೋಟು, ಒಂದು ಶಲ್ಲೆ, ಕಾಲಲ್ಲಿ ಮಿರಿಮಿರಿ ಮಿಂಚುವ ಚೀನೀ ಕಾಲ್ಮರಿ. ಕಿಸೆಯ ಬಳಿಯಲ್ಲಿ ಗಡಿಯಾರದ ಚಿನ್ನದ ಸರಪಳಿಯ ತುದಿಯಲ್ಲಿ ಒಂದು ಹುಲಿಯುಗುರು ನೇತಾಡುತ್ತಿದೆ ಹಳ್ಳಿಯ ಹಿರಿಯ ಸಿರಿವಂತರಂತೆ ಕಾಣುವರು. ಹತ್ತಿರದಲ್ಲಿಯೆ ಒಂದು ಸ್ಟೂಲಿನ ಮೇಲೆ ಜುರೂಟಿನ ಸಾಮಾನುಗಳು ಇಡಲ್ಪಟ್ಟದ್ದವು, ಅವನ್ನು ಸರಿಸಿ, ಅವರಿಗೆ ಅದರ ಮೇಲೆ ಕುಳ್ಳಿರಲು ವಿಜಯ ಹೇಳಿದ. ಮುದುಕ ಗೃಹಸ್ಥ ಅದರ ಮೇಲೆ ಕುಳಿತು 'ನಮಸ್ಕಾರ ಬಾಬೂಸಾಹೇಬರೇ' ಎಂದ.

ವಿಜಯನೆಂದ "ನಮಸ್ಕಾರ."

ಬಂದ ಮುದುಕ ಎಂದ 'ತಾವು ಈ ಊರಿನ ಜಮೀನುದಾರರು, ತಮ್ಮ ತಂದೆಯವರು ದೊಡ್ಡವರು, ಪ್ರತಿಷ್ಠಿತ ಮನುಷ್ಯರು—ಲಕ್ಷಾಧೀಶರು. ಅವರ ಹೆಸರು ತೆಗೆದುಕೊಂಡರೆ ಬೆಳಗು ಆಗುವುದು—ತಾವು ಅವರ ಸುಪುತ್ರರು. ಆ ಬಡವೆಯ ಮೇಲೆ ದಯೆ ತೋರದಿದ್ದರೆ ಕಷ್ಟಕ್ಕೀಡಾಗವಳು.

'ಬಡವೆಯಾರು ? ಆಕೆಯಿಂದ ಎಷ್ಟು ರೂಪಾಯಿ ಸಲ್ಲಬೇಕಾಗಿದೆ ?'

'ರೂಪಾಯಿಯ ಪ್ರಶ್ನೆಯಿಲ್ಲ. ನಾನು ಹೇಳುತ್ತಿರುವುದು ಸ್ವರ್ಗೀಯ ಅಮರಚಟರ್ಜಿ ಅವರ ಕನ್ನೆಯ ಬಗ್ಗೆ. ಅವರು ಪ್ರಾತಃಸ್ಮರಣೀಯರು; ಗಗನ ಚಟರ್ಜಿಯ ಮಲತಾಯಿಯ ಮಗಳು. ಇದು ಆಕೆಯ ಪಿತ್ರಾರ್ಜಿತ ಮನೆ. ಆಕೆಯು ಇರುವುದಿಲ್ಲ, ಹೋಗುವಳು, ಆಕೆಯು ಇರಬೇಕಾದ ಸ್ಥಳದ ವ್ಯವಸ್ಥೆಯಾಗಿರುವುದು ಆದರೆ ತಾವು ಆಕೆಯ ಕುತ್ತಿಗೆಗೆ ಕೈಹಾಕಿ ಹೊರಗೆ ಹಾಕುತ್ತಿರುವಿರಿ, ಇದು ತಮಗುಚಿತವೆ ?'

ಈ ಅಪರಿಚಿತ ಮುದುಕನ ಬಗ್ಗೆ ಕೋಪಿಸಿಕೊಳ್ಳುವುದು ಒಳ್ಳೆಯದಲ್ಲವೆಂಬುದನ್ನು ವಿಜಯ ಮನದಲ್ಲೇ ಅರಿತುಕೊಂಡ. ಆದರೆ ಅವನು ಮಾತನಾಡುವ ರೀತಿಯನ್ನು ಕಂಡು ಅವನು ಕಿಡಿಕಿಡಿಯಾದ. ಅವನೆಂದ "ನನಗೆ ಉಚಿತವಾದುದು ಯಾವುದು, ಅನುಚಿತವಾದುದು ಯಾವುದು ಎಂಬುದು ಗೊತ್ತು. ಆದರೆ ಆಕೆಯ ಪರವಾಗಿ ವಕೀಲೀ ಮಾಡುವ ತಾವು ಯಾರು ?"

ಮುದುಕನೆಂದ 'ನನ್ನ ಹೆಸರು ತ್ರಿಲೋಚನ ಗಂಗೋಪಾಧ್ಯಾಯ. ಈ ಬಳಿಯಲ್ಲೇ ನನ್ನೂರು—ಮಜಿವಪುರ. ನನ್ನನ್ನು ಎಲ್ಲರೂ ಬಲ್ಲರು. ತಮ್ಮ ತಂದೆಯವರ ಆಶೀರ್ವಾದದಿಂದ ಸಾಕಷ್ಟು ಶ್ರೀಮಂತನಾಗಿರುವೆ ಈ ಭಾಗದಲ್ಲಿ ನನ್ನ ಮುಂದೆ ಕೈಯೊಡ್ಡದವರೇ ವಿರಳ. ತಮಗೆ ವಿಶ್ವಾಸವಾಗ ದಿದ್ದರೆ ವಿನೋದಘೋಷರನ್ನೇ ವಿಚಾರಿಸಿ ತಿಳಿದುಕೊಳ್ಳಿರಿ.'

'ನನಗೆ ಕೈಯೊಡ್ಡುವಂತಹ ಪ್ರಸಂಗ ಬಂದಲ್ಲಿ ತಮ್ಮ ಬಗ್ಗೆ ವಿಚಾರಿ ಸುವೆ ಆದರೆ ನೀವು ಯಾರ ವಕೀಲಿಯನ್ನು ಮಾಡುತ್ತಿರುವಿರೊ ಅವರು ನಿಮಗೇನಾಗಬೇಕು ? ನಾನು ಇದನ್ನು ತಿಳಿದುಕೊಳ್ಳಬಹುದಲ್ಲವೆ ?'

ಮುದುಕ ತಮಾಷೆಗಾಗಿ ಸ್ವಲ್ಪ ನಕ್ಕು ''ಮಹಾಶಯರೇ, ವೈಶಾಖದ ಈ ಕೆಲವು ದಿನಗಳು ಕಳೆಯುತ್ತಲೇ ನಾನಾಕೆಯನ್ನು ಮದುವೆಯಾಗುವೆ' ಎಂದ.

ವಿಜಯ ಬೆಚ್ಚಿಬಿದ್ದು ಕೇಳಿದ 'ತಾವು ಅನುರಾಧೆಯ ಕೂಡ ಮದುವೆ ಮಾಡಿಕೊಳ್ಳುವಿರಾ?'

'ಹೌದು ರಾಯರೆ. ನಾನು ನಿರ್ಧಾರ ಮಾಡಿರುವೆ. ಜೇಷ್ಠದ ನಂತರ ಒಳ್ಳೆಯ ಮುಹೂರ್ತವೇ ಇಲ್ಲ. ಇಲ್ಲದೆ ಹೋಗಿದ್ದರೆ ಇದೇ ತಿಂಗಳಲ್ಲಿ ಈ ಶುಭಕಾರ್ಯವು ಸಾಂಗವಾಗುವಂತಿದ್ದಿತು. ಇನ್ನು ಸ್ವಲ್ಪ ದಿನ ಈ ಮನೆ ಯಲ್ಲಿ ಆಕೆಯನ್ನು ಇರಗೊಡಿ ಎಂದು ಹೇಳುವಂತಹ ಪ್ರಸಂಗವೇ ಬರು ತ್ತಿರಲಿಲ್ಲ.'

ವಿಜಯ ಸ್ವಲ್ಪ ಹೊತ್ತು ಸುಮ್ಮಗಿದ್ದು 'ಯಾರು ಈ ವಿವಾಹದ ಮಾತು-ಕತೆಯನ್ನು ಆಡಿದರು ? ಗಗನ ಚಟರ್ಜಿಯೆ' ಎಂದ ಮುದುಕ ಕ್ರುದ್ಧ ದೃಷ್ಟಿಯಿಂದ ನೋಡುತ್ತ 'ಅವನು ಫರಾರೀ ಆಸಾಮಿ ಮಹಾ-ಶಯರೆ—ಪ್ರಜರನ್ನು ಹಾಳು ಮಾಡಿ ಓಡಿಹೋಗಿರುವ. ಇಷ್ಟು ದಿನ ಅವನೇ ವಿಘ್ನವನ್ನುಂಟು ಮಾಡುತ್ತ ಬಂದಿದ್ದ. ಇಲ್ಲದಿದ್ದರೆ ಮಾರ್ಗಶೀರ್ಷ ಮಾಸ ದಲ್ಲೇ ಮದುವೆಯಾಗಿ ಹೋಗುತ್ತಿದ್ದಿತು. ತಾವು ಕೃಷ್ಣನ ಸಂತಾನ— ವಂಶದವರ ಮನೆಗೆ ತಂಗಿಯನ್ನು ಕೊಡುವುದಿಲ್ಲ ಎಂದು ಹೇಳುತ್ತಿದ್ದ. ಇದು ಅವನ ಮಾತು-ಕತೆ. ಆ ಹೆಮ್ಮೆ ಹೋಯಿತೆಲ್ಲಿಗೆ ?—ವಂಶಜರ ಮನೆಗೇ ಪುನಃ ಬರಬೇಕಾಯಿತಲ್ಲ ! ಹೊತ್ತು ಬಂತು ! ಈ ದಿನಗಳಲ್ಲಿ ಕುಲ

ವನ್ನು ಯಾರು ಹುಡುಕುತ್ತ ಅಲೆಯುವರು ಮಹಾಶಯರೆ ? ಹಣವೇ ಮಾನ ಮರ್ಯಾದೆ. ಹಣವೇ ಎಲ್ಲ-ಹೌದೊ ಅಲ್ಲವೊ ಹೇಳಿರಿ ? ಎಂದ.

"ಹೌದು, ಅದು ಸರಿ. ಅನುರಾಧೆಯು ಒಪ್ಪಿರುವಳೇನು ?"

ಮುದುಕ ಗರ್ವದಿಂದ ತೊಡೆಯನ್ನು ಚಪ್ಪರಿಸಿ 'ಒಪ್ಪಿಗೆ ? ಏನೆನ್ನು ವಿರಿ ನೀವು ? ದೈನ್ಯದಿಂದ ಬೇಡುತ್ತಿರುವಳು. ಪಟ್ಟಣದಿಂದ ತಾವು ಬಂದು ಬೆದರಿಸಿದಿರಿ; ಆಯಿತು, ಆಕೆಯ ಕಣ್ಣಿಗೆ ಕತ್ತಲೆ ಕಟ್ಟಿದಂತಾಯಿತು. ಅಮ್ಮಮ್ಮ, ಬಲೆಗೆ ಬಿದ್ದೇಬಿಟ್ಟಳು. ಇಲ್ಲದಿದ್ದರೆ ನನ್ನ ಆಸೆಯೆ ಹಿಂಗತೊಡ ಗಿದ್ದಿತು. ಮಕ್ಕಳು, ಸೊಸೆಯರು, ಹೆಣ್ಣುಮಕ್ಕಳು ಎಲ್ಲರೂ ಈ ಮದುವೆಗೆ ವಿರೋಧಿಗಳು. ನಾನೂ ನಿರಾಶೆಯಿಂದ ಹೋಗಲಿ ಬಿಡು, ಗುಂಡಿಕ್ಕು ಈ ಮದುವೆಗೆ, ಎರಡು ಬಾರಿ ಮದುವೆಯಂತೂ ಆಯಿತು, ಇನ್ನು ಸಾಕು ಎಂದುಕೊಂಡಿದ್ದೆ. ಆದರೆ ಈಗ ರಾಧೆಯೆ ಸ್ವತಃ ಮನುಷ್ಯನನ್ನು ಕಳುಹಿ ನನ್ನನ್ನು ಕರೆಯಿಸಿಕೊಂಡು 'ಗಂಗೋಲಿ ಮಹಾಶಯರೆ, ಚರಣಗಳಲ್ಲಿ ಎಡೆ ಗೊಡಿರಿ, ನಿಮ್ಮ ಮನೆಯಂಗಳ ಉಡಿಗಿ ಉಂಡು ತಿಂದಿರುವುದಾದರೂ ಒಳ್ಳೇ ಯದು' ಎಂದು ಅಂಗಲಾಚಿ ಹೇಳಿಕೊಂಡಳು. ಈ ವಿನಂತಿಯನ್ನು ಹೇಗೆ ಅಮಾನ್ಯ ಮಾಡುವುದು ? ಒಪ್ಪಲೇ ಬೇಕಾಯಿತು' ಎಂದ.

ವಿಜಯ ಮೂಕನಂತೆ ಕುಳಿತು ಬಿಟ್ಟ.

ಮುದುಕ ಪುನಃ ಹೇಳತೊಡಗಿದ 'ಮದುವೆ ಇದೇ ಮನೆಯಲ್ಲಿ ಆಗ ಬೇಕು. ನೋಡಲು ಸ್ವಲ್ಪ ಕುರೂಪವಾಗಿ ಕಾಣುವುದು, ಇಲ್ಲದಿದ್ದರೆ ನನ್ನ ಮನೆಯಲ್ಲೇ ಆಗಬಹುದಾಗಿದ್ದಿತು. ಗಗನ ಚಟರ್ಜಿಯು ಒಬ್ಬ ಅತ್ತೆ ಇರುವ ಳಂತೆ, ಅವರೇ ಕನ್ಯಾದಾನ ಮಾಡಿಕೊಡುವರು. ಈಗ ತಾವು ಒಪ್ಪಿದ ರಾಯಿತು, ಎಲ್ಲ ಕಾರ್ಯವೂ ಸುಗಮವಾಗಿ ಸಾಗುವುದು'

ವಿಜಯ ಮುಖವನ್ನು ಮೇಲಕ್ಕೆತ್ತಿ 'ನಾನೇನು ಮಾಡಬೇಕು ಹೇಳಿರಿ ? ನಾನು ಮನೆಯನ್ನು ಬಿಡಲು ಅವರಿಗೆ ಹೇಳಬಾರದು ತಾನೆ ? ಒಳ್ಳೇದು, ಹಾಗೇ ಆಗಲಿ. ಇನ್ನು ತಾವು ಹೋಗಬಹುದು—ನಮಸ್ಕಾರ' ಎಂದ.

'ನಮಸ್ಕಾರ ಮಹಾಶಯರೇ, ಇಷ್ಟೇ, ಇಷ್ಟೇ, ತಮ್ಮ ತಂದೆಯವರು ಲಕ್ಷಾಧೀಶರು, ಪ್ರಾತಃಸ್ಮರಣೀಯ ಮನುಷ್ಯರು, ಹೆಸರು ತೆಗೆದುಕೊಂಡರೆ ಬೆಳಗಾಗುವುದು.'

'ಅದಾಗುವುದು, ಇನ್ನು ನೀವು ದಯಮಾಡಿಸಿ.'

'ಹಾಗಾದರೆ ಹೋಗುವೆ ಮಹಾಶಯರೇ, ನಮಸ್ಕಾರ' ಎಂದು ತ್ರಿಲೋಚನಬಾಬು ಹೊರಟುಹೋದರು.

ಮುದುಕನು ಹೊರಟುಹೋದ ಬಳಿಕ ವಿಜಯ ಸುಮ್ಮನೇ ಕುಳಿತು ತನ್ನ ಮನಕ್ಕೆ ತಿಳಿಹೇಳುತ್ತಿದ್ದ—ನೀನೇಕೆ ಈ ವಿಷಯದಲ್ಲಿ ವ್ಯಗ್ರನಾಗುವೆ? ಆ ಹುಡುಗಿಗೆ ಇದನ್ನುಳಿದು ಬೇರೆ ಮಾರ್ಗವೇನಿದೆ? ಇಂಥದು ಪ್ರಪಂಚದಲ್ಲಿ ಹಿಂದೆ ಆಗೇ ಇಲ್ಲವೆಂದಿಲ್ಲ, ಎಷ್ಟೋ ಆಗಿವೆ, ಆಗುತ್ತಲೂ ಇರುತ್ತವೆ. ಅದಕ್ಕಾಗಿ ಏತಕ್ಕೆ ನೀನು ಚಿಂತೆ ಮಾಡುವೆ? ಒಮ್ಮೆಗೆ ವಿನೋದ ಘೋಷನ ಮಾತು ನೆನಪಿಗೆ ಬಂದಿತು. ಆ ದಿನ ಅವನು ಕುಲ, ಜಾತಿಗೌರವ ಕಟ್ಟಿಕೊಂಡೇನು ಮಾಡುವುದು, ಕಷ್ಟವಿಲ್ಲದೆ ಉಂಡು ಉಡಲು ದೊರೆತರೆ ನನಗೆ ಸಾಕು ಎಂದು ಅನುರಾಧೆಯು ಅಣ್ಣನ ಕೂಡ ಜಗಳಾಡುತ್ತಿದ್ದಳು ಎಂದು ಹೇಳುತ್ತಿದ್ದ.

ಆಕೆಯ ಮಾತಿಗೆ ಪ್ರತ್ಯುತ್ತರವಾಗಿ 'ನೀನು ನಿನ್ನ ತಂದೆ-ತಾಯಂದಿರ ಹೆಸರನ್ನು ಮುಳುಗಿಸಬೇಕೆನ್ನುವಿಯಾ?' ಎಂದು ಗಗನನೆಂದಿದ್ದ. ಅನುರಾಧೆಯೂ ಎಂದಿದ್ದಳು 'ನೀನು ಅವರ ವಂಶದ ಹೆಸರನ್ನು ಉಳಿಸಬಲ್ಲವನಾಗಿದ್ದರೆ ಉಳಿಸು, ನಾನು ಇಡಲಾರೆ.'

ಈ ಮಾತಿನಿಂದಾಗುವ ವೇದನೆಯನ್ನು ವಿಜಯ ಸಹಿಸದಾದ. ಅವನು ಸ್ವತಃ ಕುಲ-ಗೋತ್ರದ ಮೇಲೆ ವಿಶ್ವಾಸವಿಡುವಂಥವನಿರಲಿಲ್ಲ, ಆದಾಗ್ಯೂ ಗಗನನ ಬಗ್ಗೆ ಈ ವಿಚಾರದಲ್ಲಿ ಅವನಿಗೆ ಸಹಾನುಭೂತಿಯುಂಟಾಯಿತು. ಅನುರಾಧೆಯ ಉತ್ತರವನ್ನು ಕುರಿತು ಅವನು ಮನದಲ್ಲಿ ವಿಚಾರಮಾಡತೊಡಗಿದಂತೆ ಆಕೆಯು ನಿರ್ಲಜ್ಜಳೆಂದೂ ತುಚ್ಛಳೆಂದೂ ಎನಿಸತೊಡಗಿತು.

ಇತ್ತ ಹೊರಗೆ ಕಚೇರಿಯಲ್ಲಿ ಜನರು ಒಟ್ಟು ಸೇರತೊಡಗಿದ್ದರು. ಈಗ ಅವರೊಡನೆ ಅವನು ಕೆಲಸವನ್ನು ಪ್ರಾರಂಭಿಸಬೇಕು. ಆದರೆ ಈ ದಿನ ಯಾವುದೂ ಬೇಡವಾಯಿತು. ಆದುದರಿಂದ ಆಳುಮಗನನ್ನು ಕರೆದು ಬಂದವರೆಲ್ಲರಿಗೂ ಮನೆಗೆ ಹೋಗಲು ಹೇಳಿಕಳಿಸಿದ. ತನ್ನ ಕಿರುಮನೆಯಲ್ಲಿ ಕುಳಿತುಕೊಳ್ಳಲೂ ಆಗಲಿಲ್ಲ. ಅದೇನನ್ನೋ ವಿಚಾರಮಾಡಿ ನೇರವಾಗಿ ಮನೆಯೊಳಗೆ ಹೊಕ್ಕ. ಎದುರಿಗೆ ತೆರೆದ ಹೊರಭಾಗವಲ್ಲಿ ಒಂದು ಚಾಪೆಯ ಮೇಲೆ

ಅನುರಾಧೆಯು ಮಲಗಿರುವಳು, ಆಕೆಯ ಇಬ್ಬದಿಯಲ್ಲೂ ಸಂತೋಷ ಕುಮಾರರೂ ಒರಗಿರುವರು, ಮಹಾಭಾರತದ ಕತೆ ನಡೆದಿರುವುದು ದಿನಾಲು ರಾತ್ರಿಯ ಕೆಲಸವನ್ನು ಬೇಗಬೇಗ ಮುಗಿಸಿ ಇದೇ ರೀತಿಯಾಗಿ ಮಕ್ಕಳೊಡನೆ ಮಲಗಿಕೊಂಡು ಆಕೆಯು ಕತೆ ಹೇಳುವಳು. ಬಳಿಕ ಕುಮಾರನಿಗೆ ಊಟ ಮಾಡಿಸಿ ಅವನ ತಂದೆಯ ಬಳಿಗೆ ಕಳಿಸುವಳು ಬೆಳದಿಂಗಳ ರಾತ್ರಿ, ಮಾವಿನ ಮರದ ದಟ್ಟ ಎಲೆಗಳ ಸಂದಿನೊಳಗಿಂದ ಚಂದ್ರನ ಕಿರಣಗಳು ಸೋಸಿಬಂದು ಆಕೆಯ ಶರೀರದ ಮೇಲೂ ಮುಖದ ಮೇಲೂ ಬೀಳುತ್ತಿರುವವು. ಮರದ ನೆರಳಲ್ಲಿ ಯಾರೊ ತನ್ನ ಕಡೆಗೆ ಬರುತ್ತಿರುವುದನ್ನು ನೋಡಿದಳು. ಅನುರಾಧೆಯು ಬೆಚ್ಚಿಬಿದ್ದು 'ಯಾರವರು ?' ಎಂದಳು.

'ನಾನು ವಿಜಯ.'

ಮೂವರೂ ಗಾಬರಿಗೊಂಡು ಎದ್ದು ಕುಳಿತರು. ಸಂತೋಷನಿಗೆ ವಿಜಯನನ್ನು ಕಂಡರೆ ಬಹಳ ಭೀತಿ, ಮೊದಲನೆಯ ದಿನದ ಮರವು ಆಗಿಲ್ಲ. ಅವನು ಅತ್ತ ಇತ್ತ ನೋಡಿ ಓಡಿಹೋದ. ಕುಮಾರನೂ ತನ್ನ ಗೆಳೆಯನನ್ನು ಹಿಂಬಾಲಿಸಿದ

ವಿಜಯ 'ತ್ರಿಲೋಚನ ಗಾಂಗೋಲಿಯವರನ್ನು ತಾವು ಬಲ್ಲಿರಾ ? ಅವರು ಈ ದಿನ ನನ್ನ ಹತ್ತಿರ ಬಂದಿದ್ದರು' ಎಂದ.

ಅನುರಾಧೆಗೆ ಬಹಳ ಆಶ್ಚರ್ಯವಾಯಿತು. ಅವಳೆಂದಳು 'ತಮ್ಮ ಹತ್ತಿರ ? ಆದರೆ ತಾವು ಅವರ ಸಾಲಗಾರರಲ್ಲ.'

'ಹೌದು, ನಿಜ. ಒಂದು ವೇಳೆ ಇದ್ದಿದ್ದರೆ ಬಹುಶ: ತಮಗೆ ಲಾಭವಾಗುತ್ತಿತ್ತು. ನಾನು ಒಂದು ದಿನ ಮಾಡಿದ ಅತ್ಯಾಚಾರದ ಸೇಡನ್ನು ಮತ್ತೊಂದು ದಿನ ಎಂದಾದರೂ ತೀರಿಸಿಕೊಳ್ಳಬಹುದಾಗಿತ್ತು.' ಅನುರಾಧೆಯು ಸುಮ್ಮಗಿದ್ದಳು. ವಿಜಯ ಎನ್ನತೊಡಗಿದ 'ತಮ್ಮ ಕೂಡ ನಿಮ್ಮ ವಿವಾಹವು ನಿಶ್ಚಿತವಾಗಿರುವುದೆಂಬ ಸಂಗತಿಯನ್ನು ತಿಳಿಸಿ ಹೋಗಿರುವರು. ಇದು ನಿಜವೇ ?'

'ಹೌದು.'

''ನೀವೇ ಸ್ವತಃ ಯಾಚಕರಾಗಿ ಅವರನ್ನು ಒಪ್ಪಿಸಿದರಾ !"

'ಹೌದು; ಸತ್ಯ.'

'ಹೀಗಿದ್ದಲ್ಲಿ, ನಾಚಿಗೇಡಿತನದ ಮಾತು ಇದು. ಕೇವಲ ತಮಗಷ್ಟೇ ಅಲ್ಲ, ನನಗೂ'

'ತಮಗೇಕೆ ?'

'ಇದನ್ನೇ ಹೇಳಲು ಬಂದಿರುವೆ ನನ್ನ ಜುಲುಮೆಗಾಗಿಯೇ ತಾವು ಹೀಗೆ ಮಾಡಿರುವಿರೆಂದು ತ್ರಿಲೋಚನಲಾಲರು ಹೇಳಿದರು. ತಮಗೆಲ್ಲಿಯೂ ಸ್ಥಳವಿಲ್ಲ; ಬಹಳ ಅಂಗಲಾಚಿ ಬೇಡಿಕೊಂಡು ಅವರನ್ನು ಒಪ್ಪಿಸಿರುವಿರಿ, ಇಲ್ಲದಿದ್ದರೆ ಅವರಿಗೆ ಮದುವೆಯ ಆಸೆಯಿರಲಿಲ್ಲ. ತಮ್ಮ ಕಂಬನಿಗಳನ್ನು ನೋಡಿ ತಮ್ಮ ಮೇಲೆ ದಯೆತೋರಿಸಲು ಒಪ್ಪಿರುವರು ಎಂದು ಹೇಳುತ್ತಿದ್ದರು.'

'ಹೌದು, ಇದೆಲ್ಲವೂ ಸತ್ಯವಾದುದು.'

'ನನ್ನ ಜುಲುಮೆಯನ್ನು ನಾನು ಹಿಂತೆಗೆದುಕೊಳ್ಳುವೆ. ನನ್ನ ಆಚರಣೆಯ ಬಗ್ಗೆ ತಮ್ಮಲ್ಲಿ ಕ್ಷಮೆ ಬೇಡುವೆ.'

ಅನುರಾಧೆಯು ಸುಮ್ಮಗಿದ್ದಳು. ವಿಜಯ ಎನ್ನತೊಡಗಿದ 'ತಾವು ಅವರಿಗೆ ಈ ಕೊಟ್ಟ ಮಾತನ್ನು ಹಿಂತಿರುಗಿ ತೆಗೆದುಕೊಳ್ಳಿರಿ.'

'ಇಲ್ಲ, ಇಲ್ಲ. ಹೀಗೆ ಆಗಲಾರದು. ನಾನು ವಚನಕೊಟ್ಟು ಬಿಟ್ಟಿರುವೆ. ಎಲ್ಲರೂ ಕೇಳಿಬಿಟ್ಟಿರುವರು. ಜನರು ಅವರ ನಗೆಯಾಡುವರು.'

'ಈ ವಿಷಯದಲ್ಲಿ ನಗೆಯಾಡಲಿಕ್ಕಿಲ್ಲವೆ ? ಹೆಚ್ಚು ನಗೆಯಾಡುವರು. ತಮ್ಮಷ್ಟು ದೊಡ್ಡವರು ಹೆಣ್ಣುಮಕ್ಕಳೂ ಗಂಡುಮಕ್ಕಳೂ ಇರುವರು, ಅವರೊಡನೆ ಜಗಳಾಡುವುದು, ಅವರ ಮನೆಯಲ್ಲಿ ಉಪದ್ರವೊಂದು ಎದ್ದು ನಿಲ್ಲುವುದು, ತಮಗೆ ಅಪಾರ ಅಶಾಂತಿಯೇ ದೊರೆಯುವುದು—ಇವೆಲ್ಲ ಸಂಗತಿಗಳನ್ನು ತಾವು ಯೋಚಿಸಿರುವಿರಾ ?'

ಅನುರಾಧೆಯು ಕೋಮಲಸ್ವರದಿಂದ 'ಯೋಚಿಸಿರುವೆ. ಇದೆಲ್ಲ ಆಗಲಿಕ್ಕಿಲ್ಲ ಎಂದು ನನ್ನ ನಂಬಿಕೆ' ಎಂದಳು,

ಈ ಮಾತನ್ನು ಕೇಳಿ ವಿಜಯ ದಿಙ್ಮೂಢನಾದ. ಅವನೆಂದ 'ಅವರು ಮುದುಕರು—ಎಷ್ಟು ದಿನ ಬದುಕುವಿರೆಂದು ತಿಳಿಯುವಿರಿ ?'

'ಪತಿಯ ಆಯುಷ್ಯವು ಬಹಳವಿರಬೇಕೆಂದು ಪ್ರಪಂಚದ ಹೆಂಗುಸರೆಲ್ಲರೂ ಬಯಸುವರು. ಸೌಭಾಗ್ಯವತಿಯಿರುವಾಗಲೇ ನಾನೇ ಏಕೆ ಸತ್ತು ಹೋಗಲಿಕ್ಕಿಲ್ಲ !'

ಈ ಮಾತಿಗೆ ಉತ್ತರವು ಹುಡುಕಿದರೂ ವಿಜಯನಿಗೆ ಸಿಕ್ಕಲಿಲ್ಲ, ಸ್ತಬ್ಧನಾಗಿ ನಿಂತ. ಕೆಲ ನಿಮಿಷಗಳು ಇದೇ ನಿಸ್ತಬ್ಧತೆಯಲ್ಲಿ ಕಳೆದುವು. ಬಳಿಕ ಅನುರಾಧೆಯು ನಮ್ರ ದನಿಯಲ್ಲಿ 'ತಾವು ನನಗೆ ಮನೆಬಿಟ್ಟು ಹೋಗಲು ಅಪ್ಪಣೆಯಿತ್ತುದು ನಿಜ. ಆದರೆ ಪುನಃ ಆ ಮಾತನ್ನು ತಾವು ಎತ್ತಲೇ ಇಲ್ಲ. ನಾನು ದಯೆಗೆ ಯೋಗ್ಯಳಲ್ಲ, ಆದರೂ ತಾವು ದಯೆ ತೋರಿಸಿರುವಿರಿ. ಮನದಲ್ಲಿಯೇ ನಾನು ತಮಗೆ ಅತ್ಯಂತ ಕೃತಜ್ಞಳಾಗಿರುವೆ ನೆಂಬುದನ್ನು ಹೇಳಲು ಬಾಯಿ ಬರದು.' ಎಂದಳು.

ವಿಜಯನಿಂದ ಉತ್ತರಬಾರದಿರುವುದನ್ನು ನೋಡಿ ಪುನಃ ಎನ್ನತೊಡ ಗಿದಳು 'ನಾನು ತಮ್ಮ ವಿರುದ್ಧ ಒಂದು ಶಬ್ದವನ್ನೂ ನುಡಿದಿಲ್ಲವೆಂಬದನ್ನು ದೇವರು ಬಲ್ಲ. ಹೇಳಿದ್ದರೆ ನಾನು ಸುಳ್ಳು ಹೇಳಿದಂತಾಗುತ್ತಿತ್ತು, ಅನ್ಯಾಯ ವನ್ನು ಮಾಡಿದಂತಾಗುತ್ತಿತ್ತು. ಗಾಂಗೋಲಿ ಮಹಾಶಯರು ಏನನ್ನಾದರೂ ಹೇಳಿದ್ದರೆ ಅದು ಅವರ ಮಾತು, ನನ್ನದಲ್ಲ ಆದಾಗ್ಯೂ ನಾನು ಅವರ ಪರ ವಾಗಿ ಕ್ಷಮೆ ಬೇಡುವೆ.'

ವಿಜಯ ಕೇಳಿದ 'ತಮ್ಮ ಮದುವೆಯೆಂದು ? ಜೇಷ್ಠ ಕೃಷ್ಣ ತ್ರಯೋ ದಸಿಗೇನು ? ಸುಮಾರು ಇನ್ನೂ ಒಂದು ತಿಂಗಳ ಸಮಯ ಇದೆ—ಅಲ್ಲವೆ ?'

'ಹೌದು.'

''ಇದರಲ್ಲಿ ಬಹುಶಃ ಇನ್ನು ಬದಲಾವಣೆಯಾಗಲಾರದೇನು ?"

'ಬಹುಶಃ ಇಲ್ಲ. ಹೀಗೆಯೆ ಅವರಂತೂ ಭರವಸೆಯನ್ನು ಕೊಟ್ಟು ಹೋಗಿರುವರು.'

ವಿಜಯ ಬಹಳ ಹೊತ್ತು ಸುಮ್ಮನಿದ್ದು 'ಹಾಗಿದ್ದಲ್ಲಿ ನಾನೇನೂ ಹೇಳುವುದು ಇಲ್ಲ. ಆದರೆ ಇಷ್ಟೇ, ನೀವು ನಿಮ್ಮ ಮುಂದಿನ ಜೀವನದ ಬಗ್ಗೆ ಎಷ್ಟೂ ವಿಚಾರ ಮಾಡಿಲ್ಲ. ಎಂಬುದನ್ನು ತಿಳಿದು ನನಗೆ ಅಸಮಾಧಾನ ವಾಗಿದೆ' ಎಂದ.

'ಒಂದು ಬಾರಿಯಲ್ಲ, ನೂರು ನೂರು ಬಾರಿ ವಿಚಾರ ಮಾಡಿರುವೆ. ಹಗಲು-ರಾತ್ರಿ ಇದೇ ಚಿಂತೆ ನನಗೆ. ತಾವು ನನ್ನ ಹಿತಚಿಂತಕರು, ತಮಗೆ ಕೃತಜ್ಞತೆಯನ್ನು ಸಲ್ಲಿಸಲು ಯೋಗ್ಯವಾದ ಭಾಷೆಯೆ ನನಗೆ ಬಾರದು.

ಆದರೆ ತಾವೇ ಒಂದು ಬಾರಿ ನನ್ನ ಭವಿಷ್ಯ ಜೀವನದ ಬಗ್ಗೆ ವಿಚಾರ ಮಾಡಿ ನೋಡಿರಿ. ನನ್ನ ಬಳಿ ಹಣವಿಲ್ಲ, ರೂಪವಿಲ್ಲ, ಮನೆಯಿಲ್ಲ, ಊರಿನ ದುಷ್ಟರಿಂದ ದೂರಿದ್ದು ನನ್ನ ರಕ್ಷಣೆ ಮಾಡಿಕೊಂಡು ಇರಲು ನನಗೆ ನಿಲ್ಲಲಿಕ್ಕೂ ಸ್ಥಳವಿಲ್ಲ. ೨೩-೨೪ ವಯಸ್ಸೂ ಆಗಿಹೋಯಿತು. ಅವರ ಹೊರತು ನನ್ನನ್ನಾರು ಮದುವೆಯಾಗುವರು ತಾವೇ ಹೇಳಿರಿ? ಆ ಮೇಲೆ ಒಂದು ತುತ್ತಿಗಾಗಿ ಯಾರ ಎದುರಿಗೆ ಕೈ ನೀಡುತ್ತ ತಿರುಗಾಡಲಿ? ಕೇಳಿ ತಾವಾದರೂ ಮನದಲ್ಲಿ ಏನೆಂದು ತಿಳಿದುಕೊಂಡೀರಿ?'

ಇವೆಲ್ಲ ಮಾತುಗಳೂ ನಿಜವಿರುವವು. ಇವುಗಳ ವಿರುದ್ಧ ಏನನ್ನೂ ಹೇಳಬರುವಂತಿಲ್ಲ. ಎರಡು ಮೂರು ನಿಮಿಷ ನಿರುತ್ತರವಾಗಿ ನಿಂತು ವಿಜಯ ಅತ್ಯಂತ ದುಃಖದಿಂದ 'ಇಂತಹ ಸಮಯದಲ್ಲಿ ನಾನು ತಮಗೆ ಯಾವ ಉಪಕಾರವನ್ನೂ ಮಾಡಲಾರೆ? ಮಾಡಬಲ್ಲವನಾಗಿದ್ದರೆ ಬಹಳ ಸಂತೋಷವಾಗುತ್ತಿತ್ತು.' ಎಂದ.

'ತಾವು ನನಗೆ ಅನ್ಯರಾರೂ ಮಾಡದಂತಹ ಬಹಳ ಉಪಕಾರ ಮಾಡಿರುವಿರಿ. ನಾನು ತಮ್ಮ ಆಶ್ರಯದಲ್ಲಿ ನಿರ್ಭಯವಾಗಿ ಇರುವೆ. ಇಬ್ಬರೂ ಹುಡುಗರು ನನಗೆ ಚಂದ್ರ-ಸೂರ್ಯರಂತೆ ಇರುವರು. ಇಷ್ಟೇ ನನಗೆ ಸಾಕು. ಆದರೆ ತಾವು ನನ್ನ ಅಣ್ಣನ ದೋಷಕ್ಕೆ ನನ್ನನ್ನು ಪಾಲುಗಾರಳನ್ನಾಗಿ ಮಾಡಬೇಡಿರಿ. ನಾನು ತಿಳಿದೂ ತಿಳಿದೂ ಯಾವ ಅಪರಾಧವನ್ನೂ ಮಾಡಿಲ್ಲ. ಇಷ್ಟೇ ತಮ್ಮಲ್ಲಿ ನನ್ನ ಬೇಡಿಕೆ.'

"ಅದನ್ನು ತಾವು ನನಗೆ ಹೇಳಬೇಕಾಗಿಲ್ಲ, ನನಗದು ಗೊತ್ತು" ಎಂದು ವಿಜಯ ಮೆಲ್ಲಮೆಲ್ಲಗೆ ಹೊರಗೆ ಹೊರಟು ಹೋದ.

೫

ಕಲಕತ್ತೆಯಿಂದ ಕಾಯಿಪಲ್ಯ, ಹಣ್ಣು-ಹಂಪಲ ಮೊದಲಾದವು ಬಂದಿದ್ದುವು, ವಿಜಯ ಆಳುಮಗನಿಂದ ಆ ಸಾಮಾನುಗಳ ಬುಟ್ಟಿಯನ್ನು ಅಡುಗೆ ಮನೆಯ ಎದುರಿನಲ್ಲಿರಿಸಿ 'ಒಳಗೆ ಇರಬಹುದು—' ಎಂದ.

ಒಳಗಿಂದ ಕೋಮಲದನಿಯು ಬಂದಿತು; "ಇರುವೆ"

'ತಮ್ಮನ್ನು ಕೂಗುವುದೂ ಸ್ವಲ್ಪ ಕಠಿಣವೇ. ನಮ್ಮ ಸಮಾಜದಲ್ಲಿ ಇದ್ದಿದ್ದರೆ ಮಿಸ್ ಚಟರ್ಜಿ ಅಥವಾ ಮಿಸ್ ಅನುರಾಧಾ ಎಂದು ಸುಲಭವಾಗಿ ಕೂಗಬಹುದಾಗಿದ್ದಿತು; ಆದರೆ ಆ ರೀತಿಯಾಗಿ ಕೂಗುವುದು ಇಲ್ಲಿ ನಡೆಯು ವಂತೆಯೆ ಇಲ್ಲ ನಿಮ್ಮ ಹುಡುಗರಾದರೂ ಇದ್ದುದಾಗಿದ್ದರೆ 'ನಿನ್ನ ಚಿಕ್ಕಮ್ಮನವರನ್ನು ಕೂಗು' ಎಂದು ಕೆಲಸ ಮುಗಿಸಿಕೊಳ್ಳಬಹುದಾಗಿದ್ದಿತು. ಆಗ ಅವರೂ ಇಲ್ಲ, ಎಲ್ಲಿಗೋ ಪಲಾಯನ ಹೇಳಿಸಿದ್ದಾರೆ. ಏನೆಂದು ಕರೆ ಯಲಿ ಹೇಳಿರಿ ?'

ಅನುರಾಧೆಯು ಬಾಗಿಲ ಬಳಿಗೆ ಬಂದು 'ತಾವು ಒಡೆಯರು, ನನ್ನನ್ನು ರಾಧಾ ಎಂದೇ ಕರೆಯಿರಿ' ಎಂದಳು.

'ಕರೆಯಲು ಏನೂ ಅಡ್ಡಿಯಿಲ್ಲ; ಆದರೆ ಒಡೆತನದ ಹಕ್ಕಿನ ಬಲ ದಿಂದಲ್ಲ. ಒಡೆತನದ ಹಕ್ಕು ಇತ್ತು ಗಗನ ಚಟರ್ಜಿಯ ಮೇಲೆ; ಆದರೆ ಅವನು ಹೋಗಿದ್ದಾನೆ ಓಡಿ. ತಾವೇಕೆ ಒಡೆಯನೆಂದು ಒಪ್ಪಿಕೊಳ್ಳತೊಡಗಿ ದಿರಿ ? ತಮಗೆ ಯಾವುದರ ಅಡಚಣೆಯಿದೆ ?'

'ಇಂತಹ ಮಾತುಗಳನ್ನಾಡಬೇಡಿರಿ. ತಾವು ಒಡೆಯರೇ ಇರುವಿರಿ.'

'ಆದರೆ ಒಡೆತನದ ಅಧಿಕಾರವನ್ನು ಪ್ರಯೋಗಿಸಲು ನಾನು ಇಚ್ಛಿಸುವು ದಿಲ್ಲ, ವಯಸ್ಸಿನಿಂದ ಬರುವ ಅಧಿಕಾರ—ಒಡೆತನ ಒಪ್ಪಬಹುದು. ನಾನು ತಮಗಿಂತ ಬಹಳ ದೊಡ್ಡವ, ನಿಮ್ಮ ಹೆಸರು ತೆಗೆದುಕೊಂಡು ಕೂಗಿದರೆ ನೀವು ಕೋಪಿಸಿಕೊಳ್ಳಬೇಡಿರಿ '

''ಇಲ್ಲ."

ತಾನು ಅನುರಾಧೆಯೊಡನೆ ಸ್ನೇಹವನ್ನು ಬೆಳೆಯಿಸಲು ಆಗ್ರಹಪಡುತ್ತಿರು ವಷ್ಟು ಆಗ್ರಹವು ಆಕೆಗಿಲ್ಲವೆಂಬುದನ್ನು ವಿಜಯ ಅರಿತಿರುವ. ಆಕೆಯು ಯಾವ ರೀತಿಯಿಂದಲೂ ಎದುರಿಗೆ ಬಂದು ಮಾತನಾಡಬಯಸುವುದಿಲ್ಲ. ಮರೆ ಯಲ್ಲೇ ನಿಂತುಕೊಂಡು ಅತ್ಯಂತ ಸಂಕ್ಷೇಪವಾಗಿ ಸಮ್ಮತಪೂರ್ವಕವಾಗಿ ಉತ್ತರವೀಯುತ್ತಿರುವಳು.

'ಮನೆಯಿಂದ ಕಾಯಿಪಲ್ಲೆ, ಹಣ್ಣು-ಹಂಪಲ, ಮಿಠಾಯಿ ಮೊದಲಾ ದವು ಬಂದಿವೆ. ಇವನ್ನು ತೆಗೆದುಕೊಳ್ಳಿರಿ ಮತ್ತು ಹುಡುಗರಿಗೂ ಕೊಡಿರಿ.'

'ಆಗಲಿ, ಬೇಕಾದಷ್ಟನ್ನು ಇಟ್ಟುಕೊಂಡು ಉಳಿದುವನ್ನು ಹೊರಗೆ ತಮ್ಮ ಕಡೆಗೆ ಕಳುಹಿಸಿ ಕೊಡುವೆ.'

'ಹಾಗೆ ಮಾಡಬೇಡಿ ಮತ್ತೆ. ನನ್ನ ಅಡುಗೆಯವನಿಗೆ ಸರಿಯಾಗಿ ಅಡುಗೆ ಮಾಡಲು ಬರುವುದಿಲ್ಲ, ಮಧ್ಯಾಹ್ನದಿಂದ ಚಾದರ ಹೊದ್ದುಕೊಂಡು ಮಲಗಿರುವ. ನಿಮ್ಮ ದೇಶದ ಮಲೇರಿಯಾ ರೋಗವು ಅಂಟಿಕೊಂಡಿತೊ ಏನೋ. ಕಾಯಿಲೆ ಬಿದ್ದರೆ ತೀರಿತು, ನಮ್ಮ ಪಜೀತಿ.'

'ನಮ್ಮ ಊರಲ್ಲಿ ಮಲೇರಿಯಾ ಇಲ್ಲ. ಅವನು ಏಳದಿದ್ದರೆ ತಮಗೆ ಅಡುಗೆಯನ್ನಾರು ಮಾಡುವರು ?'

'ಈ ಹೊತ್ತಿನ ಬಗ್ಗೆ ಚಿಂತೆಯಂತೂ ಇಲ್ಲ. ನಾಳೆ ಮುಂಜಾನೆ ಅಡಿಗೆಯ ಬಗ್ಗೆ ವಿಚಾರ ಮಾಡಿದರಾಯಿತು—'ಕುಕರ್' ಸಂಗಡ ಇದೆ. ಅವನು ಏಳದಿದ್ದರೆ ಅದರಲ್ಲಿ ಆಳುಮಗನಿಂದ ಮಾಡಿಸಿಕೊಂಡರಾಯಿತು.'

'ಅದರಿಂದ ತೊಂದರೆಯಾಗುವುದಲ್ಲ !'

'ಇಲ್ಲ, ನನಗೆ ಅಭ್ಯಾಸವಿದೆ. ಆದರೆ ಮಗುವಿಗೆ ತೊಂದರೆಯಾಗುವುದನ್ನು ನೋಡಿದರೆ ಕಷ್ಟವಾಗುವುದು. ಅವನ ಭಾರವನ್ನಂತೂ ತಾವು ತೆಗೆದುಕೊಂಡಿರುವಿರಿ. ಈ ಹೊತ್ತು ಏನು ಅಡುಗೆ ಮಾಡುತ್ತಿರುವಿರಿ ? ಬುಟ್ಟಿಯನ್ನು ತೆರೆದು ನೋಡಿರಲ್ಲ, ಏನಾದರೂ ಈಗ ಮಾಡಲು ಸಿಕ್ಕಬಹುದು.'

'ನಿಜ. ಆದರೆ ಈಗ ನಾನು ಅಡುಗೆ ಮಾಡಬೇಕಾಗಿಲ್ಲ'

'ಅದೇಕೆ ?'

'ಕುಮಾರನ ಮೈ ಬೆಚ್ಚಗಾದಂತೆ ತೋರುವುದು. ಅಡುಗೆ ಮಾಡಿದರೆ ಊಟ ಮಾಡುವೆನೆಂದು ಹಟಮಾಡುವ. ಮಧ್ಯಾಹ್ನ ಮಾಡಿದುದು ಸ್ವಲ್ಪ ಉಳಿದಿದೆ. ಅದು ಸಂತೋಷನಿಗೆ ಸಾಕಾಗುವಷ್ಟು ಇದೆ.'

'ಅವನ ಮೈ ಬಿಸಿಯಾಗುತ್ತಿದೆ ? ಎಲ್ಲಿರುವ ಅವ ?'

'ನನ್ನ ಹಾಸುಗೆಯ ಮೇಲೆ ಮಲಗಿರುವ. ಸಂತೋಷನ ಕೂಡ ಹರಟುತ್ತ ಮಲಗಿರುವ ಇವೊತ್ತು ಹೊರಗೆ ಮಲಗಲು ಹೋಗುವುದಿಲ್ಲ, ನನ್ನ ಬಳಿಯಲ್ಲೇ ಮಲಗುವೆನೆಂದು ಹೇಳುತ್ತಿದ್ದ.'

'ಮಲಗಲಿ, ಮಲಗಲಿ. ಆದರೆ ಬಹಳ ಪ್ರೀತಿ ಮಾಡಿದರೆ ಪುನಃ ತನ್ನ ಚಿಕ್ಕಮ್ಮನನ್ನು ಬಿಟ್ಟು, ಮನೆಗೆ ಹೋಗಲು ಅವನು ಬಯಸಲಿಕ್ಕಿಲ್ಲ. ಪುನಃ ಮತ್ತೊಂದು ತೊಂದರೆಯನ್ನು ಸಹಿಸಬೇಕಾದೀತು.'

ಸಹಿಸಬೇಕಾಗಲಿಕ್ಕಿಲ್ಲ. ಕುಮಾರ ಹೇಳಿದುದನ್ನು ಕೇಳದಿರುವ ಹುಡುಗನಲ್ಲ.'

'ಅದೇನೋ ತಮಗೇ ಗೊತ್ತು. ಆದರೆ ನಿಮಗೆ ಬಹಳ ತೊಂದರೆ ಕೊಡುತ್ತಿರುವನೆಂದು ಕೇಳಿರುವೆ.'

'ತೊಂದರೆ ಕೊಡುತ್ತಿರುವುದು ನನಗೇ. ಮತ್ತಾರಿಗೂ ಅಲ್ಲವಷ್ಟೇ ?'

ಅದೇನೋ ಸರಿ. ಚಿಕ್ಕಮ್ಮ ಸಹಿಸಿಕೊಳ್ಳಬಹುದು; ಆದರೆ ಅತ್ತಿಗೆಯು ಸಹಿಸಿಕೊಳ್ಳಲಿಕ್ಕಿಲ್ಲ. ಒಂದು ವೇಳೆ ಎಂದಾದರೂ ಮಲತಾಯಿ ಬಂದರೆ ಅವಳೂ ಸಹಿಸಲಿಕ್ಕಿಲ್ಲ. ಅಭ್ಯಾಸ ಕೆಟ್ಟರೆ ಅದರಿಂದಲೇ ತೊಂದರೆಯಾದೀತು.'

'ಹುಡುಗನಿಗೆ ತೊಂದರೆ ಕೊಡುವಂತಹ ಮಲತಾಯಿಯನ್ನು ತಾವು ಮನೆಗೇಕೆ ತರಬೇಕು ? ತರದಿದ್ದರೂ ಪರವಾ ಇಲ್ಲ ತಾನೆ?'

,ತರುವುದಿಲ್ಲ. ಆದರೆ ಹುಡುಗನ ಭಾಗ್ಯವೇ ಕೆಟ್ಟುದು ಇದ್ದರೆ ಮಲತಾಯಿ ತಾನೇ ಬರುವಳು. ಆಗ ಆಗುವ ತೊಂದರೆಯನ್ನು ತಪ್ಪಿಸಿಕೊಳ್ಳಲು ಚಿಕ್ಕಮ್ಮನಿಗೆ ಶರಣು ಹೋಗಬೇಕಾಗುವುದು. ಆದರೆ ಅವರು ಒಪ್ಪಿದರೆ ಮಾತ್ರ.'

''ತಾಯಿಯಿಲ್ಲದ ಮಗುವನ್ನು ಚಿಕ್ಕಮ್ಮ ಬಿಡುವುದಿಲ್ಲ. ಆಕೆಯು ಎಷ್ಟೋ ತೊಂದರೆಯಲ್ಲಿರಲಿ, ಕಾಪಾಡಿ ದೊಡ್ಡವನನ್ನಾಗಿ ಮಾಡುವಳು.'

''ಈ ಮಾತನ್ನು ನೆನಪಿನಲ್ಲಿಟ್ಟಿರುವೆ" ಎಂದು ವಿಜಯ ಮೆಲ್ಲಗೆ ಹೋಗತೊಡಗಿದವನು ಪುನಃ ತಿರುಗಿ ಬಂದು ''ಆದರೆ ಅವಿನಯವನ್ನು ಕ್ಷಮಿಸಿದರೆ ಒಂದು ಮಾತನ್ನು ಕೇಳುವೆ" ಎಂದ.

''ಕೇಳಿರಿ."

''ಕುಮಾರನ ಚಿಂತೆಯನ್ನು ಆ ಮೇಲೆ ಮಾಡಿದರಾಯಿತು. ಅವನ ತಂದೆಯು ಇನ್ನೂ ಜೀವಂತ ಇರುವ. ತಾವು ಅವನನ್ನು ಎಷ್ಟು ನಿಷ್ಠುರನಿರುವನೆಂದು ತಿಳಿದಿರುವಿರೋ ಅಷ್ಟು ಅವನಿಲ್ಲ. ಆದರೆ ಸಂತೋಷ ? ಅವನ ತಂದೆ-ತಾಯಿ ಈರ್ವರೂ ಇಲ್ಲ, ಹೊಸ ಚಿಕ್ಕಪ್ಪನ ತ್ರಿಲೋಚನರ ಮನೆಯಲ್ಲಿ ಅವನಿಗೆ ಸ್ಥಳ ದೊರೆಯದಿದ್ದರೆ ಏನು ಮಾಡುವಿರಿ ? ಈ ವಿಷಯವನ್ನು ಯೋಚಿಸಿರುವಿರೇನು ?"

'ಚಿಕ್ಕಮ್ಮನಿಗೆ ಸ್ಥಳ ದೊರೆಯುವುದು, ಆದರೆ ಆಕೆಯ ಅಕ್ಕನ ಮಗನಿಗೆ ದೊರೆಯದೆ ?'

'ಹಾಗೆ ಆಗಬೇಕು. ಆದರೆ ನನಗೆ ತಿಳಿದ ಮಟ್ಟಿಗೆ, ಹಾಗೆ ಆಗಲಿಕ್ಕಿಲ್ಲ ಎಂದು ತೋರುವುದು.'

ಈ ಮಾತಿಗೆ ಆಗಲೇ ಅನುರಾಧೆಯು ಉತ್ತರವೀಯದಾದಳು. ವಿಚಾರ ಮಾಡಲು ಸ್ವಲ್ಪ ಹೊತ್ತು ಹಿಡಿಯಿತು. ಆಕೆಯು ಶಾಂತ ಮತ್ತು ದೃಢ ಕಂಠದಿಂದ ಎನ್ನತೊಡಗಿದಳು 'ಆಗ ಇಬ್ಬರಿಗೂ ಮರದ ಕೆಳಗಾದರೂ ಸ್ಥಳವು ದೊರೆಯುವುದು, ಅಲ್ಲಿ ಯಾರೂ ನಮ್ಮನ್ನು ತಡೆಯಲಾರರು ತಾನೆ ?'

'ಮಾತು ಚಿಕ್ಕಮ್ಮನಿಗೆ ಒಪ್ಪತಕ್ಕಂತಹುದೇ; ಇದನ್ನು ಯಾರೂ ಇಲ್ಲೆನ್ನರಾರರು. ಆದರೆ, ಇದು ಸಂಭವವಿಲ್ಲ. ಆಗ ಅವನನ್ನು ನನ್ನ ಕಡೆಗೆ ಕಳಿಸಿ ಕೊಡಿರಿ. ಕುಮಾರನ ಗೆಳೆಯ ಅವ. ಕುಮಾರ ಮನುಷ್ಯನಾದರೆ ಅವನೂ ಆಗುವ.'

ಒಳಗಿಂದ ಯಾವ ಉತ್ತರವೂ ಬರಲಿಲ್ಲ; ವಿಜಯ ಸ್ವಲ್ಪ ಹೊತ್ತು ದಾರಿನೋಡಿ ಹೊರಗೆ ಹೊರಟುಹೋದ.

ಒಂದೆರಡು ಗಂಟೆಗಳು ಕಳೆದ ನಂತರ ಸಂತೋಷ ಹೊರಗೆ ಬಂದು ಬಾಗಿಲ ಬಳಿ ನಿಂತು 'ಚಿಕ್ಕಮ್ಮ ತಮ್ಮನ್ನು ಊಟಕ್ಕೆ ಕರೆಯುತ್ತಿರುವಳು' ಎಂದ.

''ನನ್ನನ್ನು ?'' ಎಂದ ವಿಜಯ. 'ಹೌದು' ಎಂದು ಸಂತೋಷ ಹೊರಟುಹೋದ.

ಅನುರಾಧೆಯ ಅಡುಗೆಯ ಮನೆಯಲ್ಲಿ ಮಣೆಯನ್ನು ಹಾಕಲಾಗಿತ್ತು ಅದರ ಮೇಲೆ ಕುಳಿತು ವಿಜಯ ಎಂದ 'ರಾತ್ರಿಯನ್ನು ಹಾಗೆಯೇ ಸುಲಭ ವಾಗಿ ಕಳೆಯಬಹುದಾಗಿತ್ತು—ತಾವು ಇಷ್ಟೇಕೆ ತೊಂದರೆಯನ್ನು ತೆಗೆದು ಕೊಂಡಿರಿ ?'

ಅನುರಾಧೆಯು ಅಲ್ಲಿಯೇ ಹತ್ತಿರ ನಿಂತಿದ್ದಳು, ಮಾತನಾಡಲಿಲ್ಲ.

ಬಡಿಸಿದ ವಸ್ತುಗಳಲ್ಲಿ ವಿಶೇಷವಾಗಿ ಏನನ್ನೂ ತಯಾರ ಮಾಡಿದ್ದಿರ ಲಿಲ್ಲ. ಆದರೆ ನೀಟಾಗಿ ಮಾಡಿದಂಥ ಖಾದ್ಯ ಪದಾರ್ಥಗಳು ಇದ್ದುವು. ಎಷ್ಟು ಸುಂದರವಾಗಿ ಬಡಿಸಲಾಗಿದ್ದುವು ಅವು ! ಉಣ್ಣುತ್ತ ಉಣ್ಣುತ್ತ ವಿಜಯನೆಂದ.

''ಕುಮಾರ ಏನುಂಡ?''

'ಸಾಬೂದಾಣೆಯ ಪಾಯಸ ಕುಡಿದು ಮಲಗಿರುವ.'

'ಜಗಳಾಡಲಿಲ್ಲವೇನು ?'

ಅನುರಾಧೆಯು ನಕ್ಕಳು ಮತ್ತು ನುಡಿದಳು, 'ನನ್ನ ಬಳಿಯಲ್ಲಿ ಮಲಗುವವನು ಇದ್ದುದರಿಂದ ಶಾಂತನಾಗಿದ್ದ. ಎಷ್ಟೂ ಜಗಳಾಡಲಿಲ್ಲ.'

'ಅವನಿಂದ ತಮಗೆ ತೊಂದರೆ ಹೆಚ್ಚಾಗಿದೆ; ಆದರೆ ಇದರಲ್ಲಿ ನನ್ನ ದೋಷವಿಲ್ಲ. ಅವನು ತಾನಾಗಿಯೆ ತಮ್ಮ ಮನೆಯಲ್ಲಿ ಹೇಗೆ ಒಂದಾಗಿ ಹೋದನೆಂಬುದನ್ನೇ ಯೋಚಿಸುತ್ತಿರುವೆ.'

''ನಾನೂ ಇದನ್ನೇ ಯೋಚಿಸುತ್ತಿರುವೆ.''

'ಅವನು ಮನೆಗೆ ಹೊರಟು ಹೋದರೆ ತಮಗೆ ಕಷ್ಟವಾಗಬಹುದೆಂದು ತೋರುತ್ತದೆ.'

ಅನುರಾಧೆಯು ಮೊದಲು ಸುಮ್ಮಗಿದ್ದಳು, ಬಳಿಕ 'ತಾವು ಅವನನ್ನು ಮನೆಗೆ ಕರೆದುಕೊಂಡು ಹೋಗುವ ಮೊದಲು ಒಂದು ವಚನವನ್ನು ಕೊಡಬೇಕಾಗುವುದು - ಅವನಿಗೆ ಇನಿತೂ ತೊಂದರೆಯಾಗದಂತೆ ನೋಡಿಕೊಳ್ಳುವೆ ಎಂದು' ಎಂದಳು

'ಆದರೆ, ನಾನು ಹೊರಗಿನ ಕೆಲಸದಲ್ಲಿ ತೊಡಗಿರುವೆ—ನನ್ನ ವಚನವನ್ನು ಪಾಲಿಸುವೆನೊ ಇಲ್ಲವೊ ಹೇಳಲಾರೆ.'

''ಹಾಗಾದರೆ, ಅವನನ್ನು ನನ್ನ ಹತ್ತರವೇ ಬಿಟ್ಟು ಹೋಗಬೇಕು.''

'ತಾವು ತಪ್ಪು ಮಾಡುತ್ತಿರುವಿರಿ. ಇದು ಇನ್ನೂ ಅಸಂಭವವಾದದು' ಎಂದು ವಿಜಯ ನಗುತ್ತ ಉಣ್ಣತೊಡಗಿದ ಉಣ್ಣುತ್ತ ಉಣ್ಣುತ್ತ ನಡುವೇ ನುಡಿದ. 'ಅತ್ತಿಗೆ ಮೊದಲಾದವರು ಇಲ್ಲಿಗೇ ಬರಬೇಕೆಂದಿದ್ದರು. ಇನ್ನು ಅವರು ಬಹುಶಃ ಬರಲಿಕ್ಕಿಲ್ಲ.'

'ಏಕೆ ?'

'ಬರುವೆವೆಂದು ಹೇಳಿದಾಗಿನ ಉತ್ಸಾಹವು ಈಗ ಉಳಿದಿರಲಿಕ್ಕಿಲ್ಲ. ಪಟ್ಟಣದವರು ಹಳ್ಳಿಯ ಕಡೆಗೆ ಬೇಗ ಹೊರಡಲು ಇಚ್ಛಿಸುವುದಿಲ್ಲ. ಒಂದು ದೃಷ್ಟಿಯಿಂದ ಒಳ್ಳೆಯದೇ ಆಯಿತು. ನಾನೊಬ್ಬನೇ ತಮಗೆ ಸಾಕಷ್ಟು ತೊಂದರೆ ಕೊಡುತ್ತಿರುವೆ. ಅವರು ಬಂದಿದ್ದರೆ ಇನ್ನೂ ತೊಂದರೆಯಾಗುತ್ತಿತ್ತು.'

ಅನುರಾಧೆಯು ಇದನ್ನು ವಿರೋಧಿಸುತ್ತ 'ತಾವು ಹೀಗೆನ್ನುವುದು ಸರಿಯಲ್ಲ. ಮನೆಯು ನನ್ನದಲ್ಲ, ತಮ್ಮದು. ಆದಾಗ್ಯೂ ನಾನೇ ಇಡೀ ಮನೆಯಲ್ಲಿ ಪಸರಿಸಿಕೊಂಡು ಇರಬೇಕು, ಅವರು ಬಂದರೆ ಕೋಪಿಸಿಕೊಳ್ಳಬೇಕೆ ? ನಾನು ಹಾಗೆ ಬಯಸಿದರೆ ಅನ್ಯಾಯ ಮಾಡಿದಂತಾಗುವುದು. ನನ್ನ ಬಗ್ಗೆ ಈ ರೀತಿ ಯೋಚಿಸಿ ನನ್ನ ಪ್ರತಿಯಾಗಿ ನೀವು ಅನ್ಯಾಯ ಮಾಡುತ್ತಿರುವಿರಿ. ನನ್ನ ಮೇಲೆ ತಾವು ಮಾಡಿದ ದಯಾದಾನಕ್ಕೆ ಇದೇ ನನ್ನ ಪರವಾಗಿ ಪ್ರತಿದಾನವೇನು ?' ಎಂದಳು.

ಇಷ್ಟು ಮಾತುಗಳನ್ನು ಇಂದಿನಷ್ಟು ಚೆನ್ನಾಗಿ ಆಕೆಯು ಹಿಂದೆ ಎಂದೂ ಹೇಳಿರಲಿಲ್ಲ. ಮಾತುಗಳನ್ನು ಕೇಳಿ ವಿಜಯು ಅಚ್ಚರಿಗೊಂಡ. ಅವನು ಈ ಹಳ್ಳಿಯ ಹುಡುಗೆಯನ್ನು ಎಷ್ಟು ಅಶಿಕ್ಷಿತಳೆಂದು ತಿಳಿದುಕೊಂಡಿದ್ದನೊ ಅಷ್ಟು ಆಕೆಯು ಇರಲಿಲ್ಲ. ಸ್ವಲ್ಪಹೊತ್ತು ಸುಮ್ಮಗಿದ್ದು ಅವನು ತನ್ನ ತಪ್ಪನ್ನು ಒಪ್ಪಿಕೊಳ್ಳುತ್ತಾ 'ನಿಜವಾಗಿಯೂ ನಾನು ಹೀಗೆ ಹೇಳಿದುದು ಸರಿಯಲ್ಲ; ಉಚಿತವಲ್ಲ ಯಾರನ್ನು ಲಕ್ಷ್ಯದಲ್ಲಿಟ್ಟುಕೊಂಡು ಈ ಮಾತುಗಳನ್ನು ಆಡಿದೆನೊ ಅವರಿಗಿಂತ ನೀವು ಹೆಚ್ಚು ದೊಡ್ಡವರು ಆದರೆ ಒಂದೆರಡು ದಿನಗಳ ಬಳಿಕ ನಾನು ಊರಿಗೆ ಹೋಗುವೆ. ಇಲ್ಲಿಗೆ ಮೊದಲು ಬಂದಾಗ ತಮ್ಮೊಡನೆ ಬಹಳ ಕಠೋರತನದಿಂದ ನಡೆದುಕೊಂಡೆ;ಹಾಗೆ ಆದುದು ಸರಿಯಾಗಿ ತಮ್ಮಪರಿಚಯವಾಗದೇ ಇದ್ದುದರಿಂದ. ಪ್ರಪಂಚದಲ್ಲಿ ವಿಶೇಷವಾಗಿ ಹೀಗೆಯೆ ಆಗುತ್ತಿರುತ್ತದೆ. ಆದಾಗ್ಯೂ ಅತ್ಯಂತ ನಾಚಿಕೆಯಿಂದ ತಮ್ಮಲ್ಲಿ ನಾನು ಕ್ಷಮಾಯಾಚನೆ ಮಾಡುವೆ' ಎಂದ. ಅನುರಾಧೆಯು ಮೆಲು ದನಿಯಿಂದ ಕ್ಷಮೆಯು ತಮಗೆ ಸಿಗದು ಎಂದಳು.

'ಸಿಗದು ? ಅದೇಕೆ ?'

'ಇದು ವರೆಗೆ ನೀವು ಮಾಡಿದ ಅತ್ಯಾಚಾರಕ್ಕೆ ಕ್ಷಮೆಯಿಲ್ಲ' ಎಂದು ನಕ್ಕಳು. ದೀಪದ ಮಂದ ಪ್ರಕಾಶದಲ್ಲಿ ಆಕೆಯ ನಗುವಿನ ಮೇಲೆ ವಿಜಯನ ದೃಷ್ಟಿಯು ಹೋಯಿತು. ಕ್ಷಣಮಾತ್ರದ ಒಂದು ಅಜ್ಞಾತವಿಸ್ಮಯದಿಂದ ಅವನ ಇಡೀ ಹೃದಯವು ಕಲಕಿ ಪುನಃ ಸ್ಥಿರವಾಯಿತು. ಸ್ವಲ್ಪ ಹೊತ್ತು ಸುಮ್ಮಗಿದ್ದು ಅವನೆಂದ 'ಇದೇ ಒಳಿತಾಯಿತು. ನನ್ನನ್ನು ಕ್ಷಮಿಸುವುದು

ಅವಶ್ಯವಿಲ್ಲ. ಅಪರಾಧಿಯ ರೂಪದಲ್ಲಿ ನನ್ನ ನೆನಹು ಸದಾ ನಿಮಗೆ ಬರುತ್ತಿರಲಿ.'

ಇಬ್ಬರೂ ಸುಮ್ಮಗಿದ್ದರು. ಮೂರು ನಾಲ್ಕು ನಿಮಿಷ ಕಿರುಮನೆಯಲ್ಲಿ ಶಾಂತತೆಯು ಹರಡಿದ್ದಿತು.

ಶಾಂತತೆಯನ್ನು ಭಂಗ ಮಾಡಿದವಳು ಅನುರಾಧೆ. ಆಕೆಯೆಂದಳು 'ತಾವು ಪುನಃ ಯಾವಾಗ ಬರುವಿರಿ?'

'ಆಗಾಗ್ಗೆ ಬಂದೇ ಬರಬೇಕಾಗುವುದು. ಆದಾಗ್ಯೂ ತಮ್ಮ ಭೆಟ್ಟಿ ಇನ್ನು ಆಗದು.'

ಊಟವಾದ ಬಳಿಕ ಹೊರಗೆ ಹೋಗುವಾಗ ಅನುರಾಧೆಯೆಂದಳು 'ಬುಟ್ಟಿಯಲ್ಲಿ ಅನೇಕ ಬಗೆಯ ಕಾಯಿಪಲ್ಲೆಗಳಿವೆ, ಅವನ್ನು ಇನ್ನು ಹೊರಗೆ ಕಳಿಸುವುದಿಲ್ಲ. ನಾಳೆ ಮಧ್ಯಾಹ್ನ ಕೂಡ ಇಲ್ಲೇ ಊಟ ಮಾಡಿರಿ'

'ತಥಾಸ್ತು. ಅನ್ಯರಕಿಂತ ನನ್ನ ಹಸಿವೆ ಸ್ವಲ್ಪ ಹಿರಿದು ಎಂದು ತಿಳಿದುಕೊಂಡಿರಬಹುದು. ಇಲ್ಲದಿದ್ದರೆ ಇನ್ನೂ ಆಮಂತ್ರಣದ ಅವಧಿಯನ್ನು ಬೆಳೆಯಿಸಿರಿ ಎಂದೂ, ನಾನೆಷ್ಟು ದಿನ ಇಲ್ಲಿರುವೆನೊ ಅಷ್ಟು ದಿನ ತಮ್ಮ ಕೈಯಿಂದ ಮಾಡಿದ ಅಡುಗೆಯನ್ನು ಉಂಡು ಮನೆತನವನ್ನು ನಡೆಸುವೆನು ಎಂದೂ ಹೇಳುತ್ತಿದ್ದೆ.'

"ಇದು ನನ್ನ ಸೌಭಾಗ್ಯ."

ಮರುದಿನ ಅನೇಕ ತರದ ಖಾದ್ಯ ಪದಾರ್ಥಗಳು ಅನುರಾಧೆಯ ಅಡುಗೆಯ ಮನೆಯ ಮುಂದೆ ಬಂದುವು. ಆಕೆಯು ಬೇಡವೆಂದು ಹಿಂತಿರುಗಿ ಕಳುಹಲಿಲ್ಲ, ಎತ್ತಿ ಒಳಗೆ ಇಟ್ಟಳು.

ಬಳಿಕ ಮೂರು ದಿನಗಳ ಬದಲು ಐದು ದಿನಗಳು ಕಳೆದವು. ಕುಮಾರ ಪೂರ್ಣ ಸ್ವಸ್ಥನಾದ. ಆತಿಥ್ಯದಲ್ಲಿ ಯಾವುದೂ ಕೊರತೆಯಿಲ್ಲ. ಆದರೆ ಯಾವ ರೀತಿಯಿಂದಾದರೂ ಪರಿಚಯದ ಪರಿಧಿಯು ತಿಲಮಾತ್ರವಾದರೂ ಸಂಕುಚಿತವಾಗಿಲ್ಲ, ಯಾವ ನೆಪದಿಂದಲೂ ಆಕೆಯು ಹತ್ತಿರ ಬಂದಿಲ್ಲ. ಎಂಬುದನ್ನು ವಿಜಯ ಕಂಡ; ದುಃಖಿತ ಹೃದಯದಿಂದ ನೋಡಿದ. ಅಡುಗೆಯ ಮನೆಯ ಹೊರಭಾಗದಲ್ಲಿ ನೀಟಾಗಿ ತಟ್ಟೆಯನ್ನು ಬಿಡಿಸಿ ಕಳಿಸುವಳು. ಮತ್ತೆ ಬೇಕಾದ ಪದಾರ್ಥಗಳನ್ನು ಸಂತೋಷ ಬಡಿಸುವನು. ಕುಮಾರ ಬಂದು 'ಅಪ್ಪಾ,

ಮೀನದ ಪಲ್ಯವನ್ನು ಇಷ್ಟು ತಿನ್ನದೆ ಇದ್ದರೆ ಆಗದು, ಎಲ್ಲವನ್ನೂ ತಿನ್ನ ಬೇಕೆಂದು ಚಿಕ್ಕಮ್ಮ ಹೇಳುವಳು' ಎಂದ. ವಿಜಯ ಹೇಳಿದ 'ಅಪ್ಪ, ಅವ ಳನ್ನು ರಾಕ್ಷಸನೆಂದು ತಿಳಿಯುವುದು ತಪ್ಪು ಎಂದು ನಿನ್ನ ಚಿಕ್ಕಮ್ಮನಿಗೆ ಹೇಳು.'

ಕುಮಾರ ಮತ್ತೆ ಬಂದು 'ಮೀನದ ಪಲ್ಯ ಬಿಡಬಹುದು, ಬಹುಶಃ ಚೆನ್ನಾಗಿ ಆಗಿರಲಿಕ್ಕಿಲ್ಲ. ಆದರೆ ನಿನ್ನೆಯಂತೆ ಬಟ್ಟಲಲ್ಲಿ ಹಾಲನ್ನು ಹಾಗೆಯೆ ಉಳಿಯಗೊಟ್ಟರೆ ಆಕೆಗೆ ದುಃಖವಾಗುವುದು' ಎಂದ.

ವಿಜಯ ಪುನಃ ಹೇಳಿದ 'ನಾಳೆಯಿಂದ ನಿನ್ನ ಚಿಕ್ಕಮ್ಮ ದೊಡ್ಡ ಬಟ್ಟಲದಲ್ಲಿ ಹಾಲು ಕೊಡುವುದಕ್ಕಿಂತ ಚಿಕ್ಕದರಲ್ಲಿ ಕೊಟ್ಟರೆ ಉಳಿಯಲಿಕ್ಕಿಲ್ಲ ಎಂದು ಹೇಳು.'

೬

ಇದೇ ರೀತಿಯಾಗಿ ಈ ಐದು ದಿನಗಳೂ ಕಳೆದುವು. ಹೆಂಗಸರು ಮಾಡುವ ಆದರ, ಜೋಪಾನದ ಕಲ್ಪನೆಯು ವಿಜಯನಿಗೆ ಇದು ವರೆಗೆ ಅಸ್ಪ ಷ್ಟವಾಗಿದ್ದಿತು. ತನ್ನ ತಾಯಿ ಯಾವಾಗಲೂ ಬೇನೆ-ಬೇಸರಿಕೆಯಲ್ಲಿರುವು ದನ್ನೇ ನೋಡಿದ್ದ. ಆಕೆಯ ಗೃಹಿಣೀತ್ವವನ್ನು ನೋಡಿರಲಿಲ್ಲ. ಅವನ ಹೆಂಡತಿ ಎರಡು ವರ್ಷ ಮಾತ್ರ ಜೀವಿಸಿದ್ದಳು. ಆಗ ಅವನು ಕಾಲೇಜಿನಲ್ಲಿ ಅಭ್ಯಾಸ ಮಾಡುತ್ತಿದ್ದ. ಬಳಿಕ ಅವನ ಸಮಯ ದೂರದೇಶಗಳ ಪ್ರವಾಸ ದಲ್ಲಿಯೆ ಕಳೆದು ಹೋಗಿದ್ದಿತು. ಹೆಂಗುಸರ ವಿಷಯದಲ್ಲಿ ಆಗಿನ ಎಷ್ಟೋ ಒಳ್ಳೆಯ ಮತ್ತು ಕೆಡಕು ಇರುವ ಅನುಭವಗಳು ನೆನಪಿಗೆ ಬರುತ್ತಿದ್ದವು.

ಆದರೆ ಅವೆಲ್ಲವೂ ಪುಸ್ತಕದೊಳಗಿನ ಅವಾಸ್ತವಿಕ ಕತೆಗಳಂತೆ ಎನಿಸು ತ್ತಿದ್ದವು. 'ಜೀವನದ ವಾಸ್ತವಿಕ ಕುಂದುಕೊರತೆಗಳೊಡನೆ ಸಂಬಂಧವು ಅವ ನಿಗೆ ತಪ್ಪೇ ಹೋಗಿದ್ದಿತು.

ಪ್ರಭಾಮಯಿ ಎಂಬ ಅತ್ತಿಗೆಯೋರ್ವಳಿದ್ದಳು. ಈ ಅತ್ತಿಗೆಯ ಪ್ರಾಧಾನ್ಯವಿದ್ದ ಪರಿವಾರದಲ್ಲಿ ಒಳಿತು ಕೆಡುಕಿನ ವಿಷಯವಾಗಿ ವಿಮರ್ಶೆಯೇ ನಡೆದಿರುವುದು. ಆದರೆ ಆ ಪರಿವಾರವು ಅವನಿಗೆ ತನ್ನದೆಂದು ಎನಿಸುವುದಿಲ್ಲ. ತಾಯಿಯು ಅನೇಕ ಸಲ ಅಳುವುದನ್ನು ಕಂಡಿರುವ, ತಂದೆಯು ಅನೇಕ ಬಾರಿ

ಕೋಪ ಮತ್ತು ಉದಾಸೀನತೆಯಿಂದ ಇರುವುದನ್ನು ನೋಡಿರುವ. ಆದರೆ ಇದೆಲ್ಲವೂ ಅವನಿಗೆ ಸರಿಯಾಗಿ ಕಂಡಿಲ್ಲ. ಅತ್ತಿಗೆಯು ತನ್ನ ಭಾವ ಮೈದುನರ ಹಿತ ಬಯಸದೆ ಇರುವುದು, ಸೊಸೆಯು ತನ್ನ ಅತ್ತೆ ಮಾವಂದಿರ ಚಿಂತೆ, ಸೇವೆ ಮಾಡದೆ ಇರುವುದು ಮಹಾಪರಾಧ ಎಂದೂ ಅವನ ವಿಚಾರವಲ್ಲ. ಒಂದು ವೇಳೆ ತನ್ನ ಹೆಂಡತಿಯೆ ಹೀಗಿದ್ದರೆ ಅವನಿಗೆ ಕೆಡಕೂ ಎನಿಸುತ್ತಿರಲಿಲ್ಲ ಎಂದು ಹೇಳಬಹುದು. ಆದರೆ ಅವನ ಈ ಎಲ್ಲ ಆಧುನಿಕ ವಿಚಾರಗಳನ್ನು ಐದು ದಿನಗಳು ಕದಡಿ ಸಡಲಿಸಿ ಬಿಟ್ಟಿರುವವು. ಇವೊತ್ತು ಅವನು ಸಾಯಂಕಾಲದ ರೈಲುಗಾಡಿಯಿಂದ ಕಲಕತ್ತೆಗೆ ಹೋಗಬೇಕೆಂದು ವಿಚಾರ ಮಾಡಿದ್ದ. ಆಳುಮಕ್ಕಳು ಸಾಮಾನುಗಳನ್ನು ಕಟ್ಟಿ ಹೊರಡುವ ಸಿದ್ಧತೆಯಲ್ಲಿದ್ದರು. ಹೊರಡಲು ಬಹಳ ವೇಳೆಯೂ ಇರಲಿಲ್ಲ, ಒಂದೆರಡು ಗಂಟೆಗಳು ಮಾತ್ರ ಇದ್ದುವು ಇಷ್ಟರಲ್ಲಿ ಸಂತೋಷ ಬಂದು ಮರೆಯಲ್ಲಿ ನಿಂತು ''ಚಿಕ್ಕಮ್ಮ ತಮ್ಮನ್ನು ಊಟಕ್ಕೆ ಕರೆಯುತ್ತಿರುವರು' ಎಂದು ಹೇಳಿದ.

'ಈಗ ?'

'ಹೌದು' ಎಂದು ಸಂತೋಷ ಹೊರಟು ಹೋದ.

ವಿಜಯ ಒಳಗೆ ಹೋದ. ಎಂದಿನಂತೆ ಊಟಕ್ಕೆ ಕುಳಿತುಕೊಳ್ಳುವ ಸ್ಥಳದಲ್ಲಿ ಮಣೆಯನ್ನು ಹಾಕಿ ಊಟದ ವ್ಯವಸ್ಥೆಯನ್ನು ಮಾಡಲಾಗಿದ್ದಿತು. ಚಿಕ್ಕಮ್ಮನ ಭುಜಕ್ಕೆ ತೂಗುಬಿದಿದ್ದ ಅವನ ಕೈಯನ್ನು ಬಿಡಿಸಿಕೊಂಡು ಅನುರಾಧೆಯು ಅಡುಗೆಯ ಮನೆಗೆ ಹೋದಳು.

ಮಣೆಯ ಮೇಲೆ ಕುಳಿತುಕೊಂಡು ವಿಜಯನೆಂದ 'ಈ ವೇಳೆಗೆ ಇಷ್ಟೆಲ್ಲ ಏಕೆ ?'

'ಕಿಚಡಿಯನ್ನು ಮಾಡಿರುವೆ. ಸ್ವಲ್ಪ ಉಂಡುಹೋಗಿರಿ.'

ಉತ್ತರವೀಯಲು ಈ ದಿನ ವಿಜಯನು ತನ್ನ ಗಂಟಲನ್ನು ಸ್ವಲ್ಪ ಸ್ವಚ್ಛ ಮಾಡಿಕೊಳ್ಳಬೇಕಾಯಿತು. ಅವನೆಂದ 'ಆ ವೇಳೆಯಲ್ಲಿ ತಾವು ಏಕೆ ತೊಂದರೆ ತೆಗೆದುಕೊಂಡಿರಿ ? ಇದರ ಬದಲಾಗಿ ಮೂರುನಾಲ್ಕು ಪುರಿಗಳನ್ನು ಕರಿದು ಬಿಟ್ಟರಾಗುತ್ತಿತ್ತು, ಅಷ್ಟರಿಂದ ನನ್ನ ಊಟದ ಶಾಸ್ತ್ರ ಆಗುತ್ತಿತ್ತು.'

'ಪುರಿಗಳನ್ನು ತಾವಂತೂ ತಿನ್ನುವುದಿಲ್ಲ. ಊರಿಗೆ ಹೋಗಿ ಮನೆ

ಮುಟ್ಟಬೇಕಾದರೆ ರಾತ್ರಿ ೩-೪ ಬಾರಿಸಬಹುದು. ಉಪವಾಸ ಹೋದರೆ ನನಗೆ ಕಡಮೆ ಕಷ್ಟವಾಗುವುದೇನು ? ಹುಡುಗ ಗಾಡಿಯಲ್ಲಿ ಊಟ ಮಾಡದೆ ಹಾಗೇ ಮಲಗಿರಬಹುದೆಂಬ ವಿಚಾರ ಆಗಾಗ್ಗೆ ಬಂದೇ ಬರುತ್ತಿತ್ತು.'

ವಿಜಯ ಸುಮ್ಮನೆ ಉಣ್ಣುತ್ತಿದ್ದ, ಪುನಃ ಎಂದ 'ಮತ್ತು ಕಾಳಜಿ ತೆಗೆದು ಕೊಳ್ಳಲು ವಿನೋದನಿಗೆ ಹೇಳಿರುವೆ. ತಾವು ಮನೆಯಲ್ಲಿ ಎಷ್ಟು ದಿನ ಇರು ವಿರೊ ಅಷ್ಟು ದಿನ ತಮಗೆ ಯಾವ ತೊಂದರೆಯೂ ಆಗಲಿಕ್ಕಿಲ್ಲ.'

ಸ್ವಲ್ಪ ಹೊತ್ತು ಸುಮ್ಮಗಿದ್ದು ಪುನಃ ಅವನು ಎನ್ನತೊಡಗಿದ. 'ಇನ್ನೊಂದು ಮಾತನ್ನು ನಾನು ತಮಗೆ ಹೇಳಿಹೋಗುವೆ....ಗಗನನ ಭೆಟ್ಟಿಯು ಎಂದಾದರೂ ತಮಗಾದರೆ, ನಾನು ಅವನನ್ನು ಕ್ಷಮಿಸಿರುವೆನೆಂದು ಹೇಳಿರಿ ಆದರೆ ಅವನು ಈ ಊರಲ್ಲಿ ಬಂದು ಇರಬಾರದು. ಬಂದು ಇದ್ದರೆ ನಾನು ಕ್ಷಮಿಸುವುದಿಲ್ಲ.'

'ಎಂದಾದರೂ ಭೆಟ್ಟಿಯಾದರೆ ಹೇಳುವೆ' ಎಂದು ಸ್ವಲ್ಪಹೊತ್ತು ಸುಮ್ಮ ಗಿದ್ದು ಪುನಃ ಎನ್ನತೊಡಗಿದಳು 'ಕುಮಾರನ ಬಗ್ಗೆ ಸ್ವಲ್ಪ ಕಷ್ಟ. ಅವನು ಈ ದಿನ ಊರಿಗೆ ಹೋಗಲು ಒಪ್ಪಲೊಲ್ಲ. ಹೋಗದೇ ಇರದಿರುವುದಕ್ಕೆ ಕಾರಣ ವನ್ನೂ ಹೇಳುತ್ತಿಲ್ಲ.'

'ಅವನಿಗೇ ಗೊತ್ತಿಲ್ಲದ್ದರಿಂದ ಹೇಳುತ್ತಿಲ್ಲ. ಅಲ್ಲಿಗೆ ಹೋದರೆ ತನಗೆ ತೊಂದರೆಯಾಗುವುದೆಂದು ಮನದಲ್ಲಿಯೆ ಅರಿತಿರುವ.'

'ಅದೇಕೆ ತೊಂದರೆಯಾಗುವುದು ?'

'ಆ ಮನೆಯ ನಿಯಮವೇ ಇದು. ಆಗಲಿ, ತೊಂದರೆಯಾದರೂ ಅಲ್ಲಿಯೆ ಇಷ್ಟು ದೊಡ್ಡವನಾಗಿರುವನಲ್ಲ !'

'ಹಾಗಿದ್ದಲ್ಲಿ ಅಲ್ಲಿಗೆ ಅವನನ್ನು ಕರೆದುಕೊಂಡು ಹೋಗುವುದು ಅವಶ್ಯ ವಿಲ್ಲ. ನನ್ನ ಹತ್ತಿರ ಅವನನ್ನು ಇರಗೊಡಿರಿ.'

ವಿಜಯ ನಗುತ್ತ 'ನನ್ನದೇನೂ ಅಡ್ಡಿಯಿಲ್ಲ, ಆದರೆ ಹೆಚ್ಚು ಹೆಚ್ಚು ಎಂದರೆ ಅವನು ಇಲ್ಲಿ ಒಂದು ತಿಂಗಳ ಇರಲಿ, ಹೆಚ್ಚಿಗೆ ಬೇಡ. ಇದರಿಂದ ಆಗುವ ಲಾಭವಾದರೂ ಏನು ?'

ಇಬ್ಬರೂ ಮೌನದಿಂದ ಇದ್ದರು. ಅನುರಾಧೆಯು ಬಳಿಕ ಎಂದಳು

'ಇವನಿಗೆ ಬರುವ ಮಲತಾಯಿ ಓದು ಬರೆಹ ಬಲ್ಲವಳಿರುವಳೆಂದು ಕೇಳಿರುವೆ.'

'ಹೌದು, ಬಿ. ಎ. ಪಾಸಾಗಿರುವಳು.'

'ನಿಜ, ಇವನ ದೊಡ್ಡಮ್ಮ (ವಿಜಯನ ಅತ್ತಿಗೆ) ಕೂಡ ಬಿ. ಎ. ಪಾಸಾಗಿರುವಳಲ್ಲ ?'

'ಸತ್ಯ. ನಿಶ್ಚಯವಾಗಿ ಬಿ. ಎ. ಆಗಿದ್ದಾಳೆ. ಆದರೆ ಬಿ. ಎ. ಪಾಸಾಗಲು ಓದಬೇಕಾದ ಪುಸ್ತಕಗಳಲ್ಲಿ ಭಾವ ಮೈದುನರನ್ನು ಪ್ರೀತಿಯಿಂದ, ಸೌಹಾರ್ದತೆಯಿಂದ ಕಾಣಬೇಕೆಂಬುದು ಬರೆದಿಲ್ಲ. ಈ ವಿಷಯದಲ್ಲಿ ಅವರು ಪರೀಕ್ಷೆ ಕೊಡಬೇಕಾಗಿರುವುದಿಲ್ಲ.'

'ಜೇನೆಬಿದ್ದ ಅತ್ತೆ ಮಾವಂದಿರ ಸೇವೆಯನ್ನು ಮಾಡಬೇಕೆಂದೂ ಬರೆದಿರುವುದಿಲ್ಲವೆ ?'

'ಇಲ್ಲ, ಅತ್ತೆ ಮಾವಂದಿರ ಸೇವೆ ಮಾಡುವುದು ಅವರ ದೃಷ್ಟಿಯಲ್ಲಿ ಹಾಸ್ಯಾಸ್ಪದ.

'ಹಾಸ್ಯಕರವಲ್ಲದುದು ಏನಾದರೂ ವಿಷಯ ಇದೆಯೇ ?'

'ಇದೆ. ಯಾವ ರೀತಿಯಲ್ಲಿಯೂ ಯಾರನ್ನೂ ದೂರದಿರುವುದೇ ನಮ್ಮ ಸಮಾಜದ ಒಳ್ಳೆಯ ನಿಯಮ.'

ಅನುರಾಧೆಯು ಸ್ವಲ್ಪ ಹೊತ್ತು ಸುಮ್ಮಗಿದ್ದ 'ಈ ನಿಯಮ ನಿಮ್ಮ ಜನಗಳಲ್ಲೇ ಇರಲಿ. ಮಗನಿಂದ ಬಿ. ಎ. ಪಾಸುಮಾಡಿಸುವು ಹೆಚ್ಚಿನದಲ್ಲ. ಬಿ. ಎ. ಪಾಸಾದ ಹೆಣ್ಣನ್ನು ಮನೆಗೆ ತರುವುದು ತರವಲ್ಲ' ಎಂದಳು.

'ಯಾರನ್ನಾದರೂ ತರಲೇಬೇಕಾಗುವುದು. 'ಬಿ ಎ. ಪಾಸ' ಆಗದೆ ಇದ್ದರೆ ನಮ್ಮ ಸಮಾಜದಲ್ಲಿ ಮರ್ಯಾದೆಯುಳಿಯುವುದು ಕಷ್ಟ ಇಂತಹ ಸಮಾಜ ನಮ್ಮದು. ನಮ್ಮ ಸಮಾಜದ ಜನರ ಮನಸು ಬಿ ಎ. ಪಾಸಾಗದೆ ಇದ್ದಾಕೆಯೊಡನೆ ಸಂಸಾರ ಮಾಡಲೂ ಬಯಸುವುದಿಲ್ಲ. ತಂದೆ-ತಾಯಂದಿರು ಸತ್ತ, ಭಾವ ಮೈದುನರ ಮಕ್ಕಳ ಸಲುವಾಗಿ ಮರದ ಕೆಳಗೆ ಇರಬೇಕೆಂದು ಬಯಸುವ ಹೆಣ್ಣಿನ ಕೂಡ ನಾವು ಕಷ್ಟಪಡಲು ಇಚ್ಛಿಸಬಹುದು, ಆದರೆ ಸಮಾಜದಲ್ಲಿ ಇರುವಂತಿಲ್ಲ.'

ಅನುರಾಧೆಯು ಸ್ವರವು ಸ್ವಲ್ಪ ತೀಕ್ಷ್ಣವಾಯಿತು. ಆಕೆಯೆಂದಳು 'ಆಗದು. ತಾವು ಇವನನ್ನು ನಿರ್ದಯ ಮಲತಾಯಿಯ ಕೈಗೆ ಒಪ್ಪಿಸಲಾಗದು.'

'ಹಾಗೇನೂ ಆಗುವ ಭಯವಿಲ್ಲ. ಆದರೆ ಒಂದು ವೇಳೆ ಅಂತಹ ಮಲ ತಾಯಿಯ ಕೈಗೆ ಕುಮಾರ ಹೋದರೆ, ಅವನು ಜಾರಿ ಕೆಳಗೆ ಬೀಳುವ. ಬರು ವವಳು ಅಷ್ಟು ನಿರ್ದಯಳೇ ಆಗಿರುವಳೆಂದು ಹೇಗೆ ಹೇಳುವುದು? ನನ್ನ ಮುಂಬರುವ ಹೆಂಡತಿಯು ಪರವಾಗಿ ತಮ್ಮ ಮಾತುಗಳನ್ನು ನಾನು ತೀವ್ರವಾಗಿ ಖಂಡಿಸುವೆ- ಪರಿಮಾರ್ಜಿತ ರುಚಿಗೆ ಒಪ್ಪಿಗೆಯಿರುವ ಉದಾಸ ಅವಹೇಳನೆ ಯಿಂದ ಆಕೆಯಲ್ಲಿ ಬಾಡಿದ ಆತ್ಮೀಯತೆಯ ಕಾಡುತನವು ನಾಮಮಾತ್ರಕ್ಕಿಲ್ಲ, ಆದುದರಿಂದ ನೀವು ಆಕೆಗೆ ಈ ದೋಷ ಕೊಡಬಾರದು.'

ಅನುರಾಧೆಯು ನಕ್ಕು 'ನೀವು ಬೇಕಾದಷ್ಟು ಖಂಡಿಸಿರಿ, ಆದರೆ ನನಗೆ ಬಾಡಿದ ಆತ್ಮೀಯತೆ ಎಂದರೇನೆಂಬುದನ್ನು ಸ್ವಲ್ಪ ತಿಳಿಸಿಕೊಡಿರಿ' ಎಂದಳು.

'ನಮ್ಮ ಜನ ಒಂದು ದೊಡ್ಡ ಗುಂಪಿನ ಪಾರಿವಾರಿಕ ಬಂಧನ. ಅದರ ಕಾನೂನೇ ಬೇರೆ, ಆಕಾರವೇ ಬೇರೆ. ಅದರ ಬೇರು ರಸ ಹೀರದು, ಎಲೆಗಳು ಹಸರು ಮುರಿಯುವು; ತಳಹದಿಯಾಗುತ್ತ ಹೋಗುವವು. ತಾವು ಹಳ್ಳಿಯ ಹೆಣ್ಣು ಮಕ್ಕಳು ಸ್ಕೂಲು ಕಾಲೇಜುಗಳಲ್ಲಿ ಅಧ್ಯಯನ ಮಾಡಿ ಯಾವ ಪರೀಕ್ಷೆಯಲ್ಲೂ ಉತ್ತೀರ್ಣರಾಗಿಲ್ಲ; ಪಾರ್ಟಿ-ಪಿಕ್‌ನಿಕ್‌ಗಳಲ್ಲಿ ಭಾಗವಹಿಸಿಲ್ಲ. ಆದುದರಿಂದ ಇವುಗಳಲ್ಲಿ ಅಡಗಿರುವ ರಹಸ್ಯವನ್ನು ನಾನು ತಮಗೆ ತಿಳಿಸಿ ಹೇಳಲಾರೆ. ಸಂಕ್ಷೇಪವಾಗಿ ಇಷ್ಟು ಹೇಳುವೆ—ಕುಮಾರನಿಗಾಗಿ ಬರುವ ಮಲತಾಯಿಯು ಅವನಿಗೆ ವಿಷವನ್ನು ಕುಡಿಸಲು ಪ್ರಯತ್ನ ಮಾಡುವಳು, ಕೈಯಲ್ಲಿ ಬಾರಕೋಲನ್ನು ತೆಗೆದುಕೊಂಡು ಬೆನ್ನಟ್ಟಳು. ಏಕೆಂದರೆ ಅದು ಪರಿಮಾರ್ಜಿತ ರುಚಿಗೆ ವಿರುದ್ಧವಾದ ಆಚರಣೆ, ಆದ್ದರಿಂದ ತಾವು ಈ ವಿಷ ಯದಲ್ಲಿ ನಿಶ್ಚಿಂತವಾಗಿರಬಹುದು.'

'ನಾನು ಆಕೆಯ ವಿಷಯವನ್ನು ಇನ್ನು ಮಾತಾಡುವುಲ್ಲ. ಆದರೆ ತಾವಾದರೂ ಕುಮಾರನನ್ನು ಸರಿಯಾಗಿ ನೋಡಿಕೊಳ್ಳುವಿರಿ ಎಂಬ ಬಗ್ಗೆ ವಚನಕೊಡಬೇಕೆಂದು ಬಿನ್ನವಿಸಿಕೊಳ್ಳುವೆ.'

'ವಚನವನ್ನು ಕೊಡಲು ಮನವು ಬಯಸುವುದು; ನನ್ನ ಸ್ವಭಾವ

ಮತ್ತು ಅಭ್ಯಾಸ ಬಹಳ ವಿಚಿತ್ರವಾಗಿರುವವು. ತಮ್ಮ ಆಗ್ರಹಕ್ಕೆ ಕಟ್ಟುಬಿದ್ದು ಆಗಾಗ್ಗೆ ಅವನ ವಿಷಯವಾಗಿ ಕಾಳಜಿ ತೆಗೆದುಕೊಳ್ಳಲು ಪ್ರಯತ್ನಿಸು ವೆನೆಂದು ಹೇಳುವೆ. ತಾವು ಬಯಸಿದಷ್ಟು ಮಾಡಲಾಗುವುದೋ ಇಲ್ಲವೊ ಹೇಳಲಾರೆ. ಒಳ್ಳೇದು, ನನ್ನ ಊಟವು ಮುಗಿಯಿತು. ಇನ್ನೂ ಹೊರಡುವ ಸಿದ್ಧತೆ ಮಾಡುವುದಿದೆ.'

ಇಷ್ಟೆಂದು ಅವನು ಎದ್ದುಬಿಟ್ಟ. ಬಳಿಕ ಎಂದ 'ಕುಮಾರ ತಮ್ಮ ಬಳಿಯಲ್ಲೇ ಇರುವ; ಕಳಿಸುವ ದಿನಗಳು ಬಂದ ಕೂಡಲೆ ಅವನನ್ನು ವಿನೋ ದನ ಸಂಗಡ ಕಲಕತ್ತೆಗೆ ಕಳಿಸಿಬಿಡಿರಿ. ಅವಶ್ಯವೆನಿಸಿದರೆ ಅವನ ಕೂಡ ಸಂತೋಷವನ್ನೂ ಕಳಿಸಿರಿ, ಮೊದಮೊದಲು ತಮ್ಮ ಕೂಡ ವ್ಯವಹರಿಸಿದಂತೆ ಈಗ ನನ್ನ ಸ್ವಭಾವವಿಲ್ಲ, ನನ್ನ ಮನೆಯಲ್ಲಿ ಕುಮಾರನಿಗಿಂತ ಹೆಚ್ಚು ಅನಾದ ರವು ಆಗಲಿಕ್ಕಿಲ್ಲವೆಂಬ ಭರವಸೆಕೊಟ್ಟು ಹೋಗುವೆ'

* * * * *

ಮನೆಯ ಎದುರಿಗೆ ಗಾಡಿಯು ನಿಂತಿದೆ. ಸಾಮಾನು ಹೇರಲಾಗಿದೆ. ವಿಜಯ ಗಾಡಿಯಲ್ಲಿ ಕುಳಿತುಕೊಳ್ಳುವುದರಲ್ಲಿದ್ದ: ಅಷ್ಟರಲ್ಲಿ ಕುಮಾರನೆಂದ 'ಅಪ್ಪಾ, ತಮ್ಮನ್ನು ಚಿಕ್ಕಮ್ಮ ಕರೆಯುತ್ತಿರುವಳು.'

ಅನುರಾಧೆಯು ಮನೆಯ ಹೆಬ್ಬಾಗಿಲ ಬಳಿ ನಿಂತಿದ್ದಳು. ಆಕೆಯು 'ನಮಸ್ಕಾರ ಮಾಡಲು ಕರೆಕಳುಹಿದೆ, ಇನ್ನೆಂದು ನಮಸ್ಕರಿಸಲು ದೊರೆಯು ವುದೊ ಗೊತ್ತಿಲ್ಲ' ಎಂದು ಕುತ್ತಿಗೆಗೆ ಸೆರಗನ್ನು ಸುತ್ತಿಕೊಂಡು ದೂರದಿಂದ ನಮಸ್ಕರಿಸಿದಳು. ಬಳಿಕ ಎದ್ದು ನಿಂತು ಕುಮಾರನನ್ನು ತನ್ನ ಬಳಿಗೆ ಕರೆದು ಕೊಂಡು 'ಅಮ್ಮನವರಿಗೆ ಕುಮಾರನ ಬಗ್ಗೆ ಯಾವ ಚಿಂತೆಯನ್ನೂ ಮಾಡ ಬಾರದೆಂದು ಹೇಳಿರಿ. ನನ್ನ ಹತ್ತರ ಇರುವಷ್ಟು ದಿವಸ ಅವನಿಗೆ ಅನಾದರ ವಾಗಲಿಕ್ಕಿಲ್ಲ' ಎಂದಳು.

ವಿಜಯ ನಕ್ಕು 'ನಂಬಿಗೆಯಾಗುವುದು ಕಷ್ಟ' ಎಂದ.

ಅನುರಾಧೆ 'ಕಷ್ಟ ಯಾರಿಗೆ ? ತಮಗೂ ಏನು? ' ಎಂದು ನಕ್ಕಳು.

ಇಬ್ಬರ ನಯನಗಳೂ ಕೂಡಿದುವು. ವಿಜಯ ಆಕೆಯ ಕಣ್ಣು ಕಂಬನಿ ತುಂಬಿದುದನ್ನು ನೋಡಿದ. ತಲೆಬಾಗಿಸಿ ಆಕೆಯೆಂದಳು 'ಕುಮಾರ ನನ್ನು ಕರೆದುಕೊಂಡು ತೊಂದರೆ ಪಡಬೇಡಿರಿ. ಮತ್ತೆ ಮತ್ತೆ ಹೇಳುವ

ಪ್ರಸಂಗ ದೊರೆಯಲಿಕ್ಕಿಲ್ಲ. ಆದ್ದರಿಂದಲೇ ಹೇಳುತ್ತಿರುವೆ. ಈಗ ತಮ್ಮ ಮನೆಯ ನೆನಪಾದೊಡನೆಯೆ ಅವನನ್ನು ಕಳಿಸಲು ಮನಸ್ಸಾಗುವುದಿಲ್ಲ.'

'ಹಾಗಾದರೆ ಕಳಿಸಬೇಡಿರಿ.'

ಉತ್ತರ ರೂಪವಾಗಿ ಆಕೆಯು ಒಂದು ನೀಳವಾದ ಉಸಿರನ್ನು ಹತ್ತಿಕ್ಕಿ ಸುಮ್ಮಗೆ ನಿಂತುಬಿಟ್ಟಳು.

'ಹೋಗುವ ಮೊದಲು ತಾವು ಕೊಟ್ಟ ವಚನದ ಬಗ್ಗೆ ತಮ್ಮನ್ನು ಎಚ್ಚರಿಸಿ ಹೋಗುವೆ. ತಮಗೆ ಏನಾದರೂ ಆವಶ್ಯಕತೆಯಿದ್ದರೆ ಪತ್ರವನ್ನು ಬರೆಯಬೇಕು, ಮರೆಯಬಾರದು, ಉಪೇಕ್ಷಿಸಬಾರದು.'

'ನನಗೆ ನೆನಪಿದೆ. ಗಾಂಗೋಲಿ ಮಹಾಶಯರನ್ನು ಭಿಕ್ಷುಕಿಯಂತೆ ಬೇಡಬೇಕಾಗುವುದು, ಮನಸ್ಸು ಬೇಡವೆಂದರೂ ಅದನ್ನು ಧಿಕ್ಕರಿಸಿ, ಸಮ್ಮಾನ ವನ್ನು ತೊರೆದು ಬೇಡಬೇಕಾಗುವದು. ಆದರೆ ತಮ್ಮ ಬಳಿಯಲ್ಲಿ ಹಾಗೆ ಆಗದು. ಬೇಕಾದುದನ್ನು ನಿಃಸಂಕೋಚವಾಗಿ ಸರಳವಾಗಿ ಬೇಡುವೆ.'

'ಆದರೆ ಈ ಮಾತು ನೆನಪಿರಲಿ !' ಎಂದು ವಿಜಯ ಹೋಗಬೇಕೆನ್ನು ವಷ್ಟರಲ್ಲಿ ಅನುರಾಧೆಯೆಂದಳು 'ಹಾಗಾದರೆ ತಾವೂ ಒಂದು ವಚನವನ್ನು ಕೊಟ್ಟು ಹೋಗಿರಿ. ತಮಗೆ ಅವಶ್ಯಕತೆಯುಂಟಾದರೆ ನನ್ನಿಂದ ಬೇಡಲು ಸಂಕೋಚಪಟ್ಟುಕೊಳ್ಳುವುದಿಲ್ಲ' ಎಂದ.

''ತಮ್ಮಿಂದ ನಾನು ಬೇಡುವುದಾದರೂ ಏನುಂಟು ಅನುರಾಧಾ ?"

''ಅದನ್ನು ನಾನು ಹೇಗೆ ಹೇಳಲಿ ? ನನ್ನ ಹತ್ತರ ಏನೂ ಇಲ್ಲ, ಆದರೆ ಆಗತ್ಯವಿದ್ದಲ್ಲಿ ಹೃತ್ಪೂರ್ವಕವಾಗಿ ತಮ್ಮ ಸೇವೆಯನ್ನು ಮಾಡಬಲ್ಲೆ.'

''ಅವರು ತಮಗೆ ಇದನ್ನು ಮಾಡಗೊಡುವರೆ ?"

''ನನ್ನನ್ನು ಯಾರೂ ತಡೆಯರು."

೨

'ಕುಮಾರ ಬರಲಿಲ್ಲ' ಎಂಬ ಸುದ್ದಿಯನ್ನು ಕೇಳಿ ತಾಯಿಯು ಎಂದಳು 'ಇದೇನೊ ? ಯಾರ ಕೂಡ ಜಗಳವಿರುವುದೋ ಅವರ ಹತ್ತರ ಹುಡುಗನನ್ನು ಬಿಟ್ಟುಬಂದೆಯಾ ?'

'ಯಾರೊಡನೆ ಜಗಳವಿತ್ತೊ ಅವನು ಪಾತಾಳಕ್ಕೆ ಹೋಗಿ ಅಡಗಿ ಕೊಂಡು ಕುಳಿತಿರುವ, ಜಗಳವೂ ಅಲ್ಲಿಗೇ ಹೋಗಿರುವುದು. ಅದನ್ನು

ಹುಡುಕಿ ತೆಗೆಯುವುದು ಬ್ರಹ್ಮನಿಂದಲೂ ಆಗದು. ಅಮ್ಮಾ ನಿನ್ನ ಮೊಮ್ಮ ತನ್ನ ಚಿಕ್ಕಮ್ಮನ ಬಳಿಯಲ್ಲಿ ಇರುವ. ಸ್ವಲ್ಪ ದಿನಗಳಾದ ಬಳಿಕ ಬರುವ.'

'ಪರಮಾತ್ಮನ ಈ ಪ್ರಪಂಚದಲ್ಲಿ ಯಾರು ಎಲ್ಲಿಂದ ಬರುವರು ಎಂಬು ದನ್ನು ಯಾರು ಹೇಳಬಲ್ಲರಮ್ಮಾ ? ನಿನ್ನ ಹಣವನ್ನೆಲ್ಲ ನುಂಗಿ ಹೋಗಿರುವ ಆ ಗಗನ ಚಟರ್ಜಿಯ ತಂಗಿಯೇ ಕುಮಾರನ ಚಿಕ್ಕಮ್ಮ. ಆಕೆಯನ್ನೇ ಮನೆ ಯಿಂದ ಹೊರಗೆಹಾಕುವುದಕ್ಕೆ ಕೋಲು, ಬಡಿಗೆ, ಪಿಸ್ತೂಲು, ಆಳುಮಕ್ಕಳು ಸಿಪಾಯರು ಸಹಿತ ಹೋಗಿದ್ದೆ. ಆದರೆ ಕುಮಾರ ಎಲ್ಲ ಕೆಡಿಸಿಬಿಟ್ಟ. ಆಕೆಯ ಸೆರಗನ್ನು ಹಿಡಿದುಕೊಂಡು ನಿಂತುಬಿಟ್ಟ ಇಬ್ಬರನ್ನೂ ಹೊರಗೆ ಹಾಕದ ವಿನಾ ಆಕೆಯನ್ನು ಹೊರಗೆ ಹಾಕಲು ಬರುವಂತಿರಲಿಲ್ಲ.'

ತಾಯಿಗೆ ಮಾತು ತಿಳಿಯಿತು. ಆಕೆಯೆಂದಳು. 'ಕುಮಾರ ಆಕೆಯ ವಶಕ್ಕೆ ಹೋಗಿರಬಹುದೆಂದು ತೋರುತ್ತದೆ. ಆ ಹುಡುಗೆಯು ಅವನನ್ನು ಬಹಳ ಪ್ರೀತಿಸಿರಬಹುದು ! ಪಾಪ, ಹುಡುಗನಿಗೆ ಪ್ರೀತಿಯೆಂಬುದು ಇಲ್ಲಿ ದೊರೆತೇ ಇಲ್ಲ' ಇಷ್ಟೆಂದು ತನ್ನ ಜಡ್ಡನ್ನು ನೆನೆದುಕೊಂಡು ಒಂದು ನಿಟ್ಟು-ಸಿರು ಬಿಟ್ಟಳು.

'ನಾನಂತೂ ಹೊರಗೇ ಇರುತ್ತಿದ್ದೆ, ಮನೆಯೊಳಗೆ ಅವನನ್ನು ಯಾರು ಪ್ರೀತಿಸುತ್ತಿದ್ದರೆಂಬುದನ್ನು ನಾನಂತೂ ಕಣ್ಣಾರೆ ಕಂಡಿಲ್ಲ. ಇಲ್ಲಿಗೆ ಬರಲು ಕುಮಾರ ತನ್ನ ಚಿಕ್ಕಮ್ಮನನ್ನೇ ಬಿಟ್ಟುಬರಲು ಬಯಸಲಿಲ್ಲ.'

ತಾಯಿಯ ಸಂದೇಹವು ಇಷ್ಟು ಹೇಳಿದರೂ ದೂರಾಗಲಿಲ್ಲ. ಆಕೆ ಯೆಂದಳು 'ಹಳ್ಳಿಯ ಹುಡುಗೆಯರಿಗೆ ಅನೇಕ ವಿಷಯಗಳು ಗೊತ್ತಿರುವವು. ಜೊತೆಗೆ ಕುಮಾರನನ್ನು ಕರೆದುಕೊಂಡು ಬಾರದಿದ್ದುದು, ಒಳಿತಾಗಲಿಕ್ಕಿಲ್ಲ.'

'ನೀನು ಹಳ್ಳಿಯ ಹುಡುಗೆಯಾಗಿ ಹಳ್ಳಿಯವರ ವಿರುದ್ಧ ದೂರು ಹೇಳುತ್ತಿರುವೆಯಲ್ಲಮ್ಮಾ? ನೀನೂ ಕೊನೆಗೆ ಪಟ್ಟಣದ ಹುಡುಗೆಯರ ಮೇಲೆಯೇ ವಿಶ್ವಾಸವಿಡತೊಡಗಿದೆಯಲ್ಲ ?'

'ಪಟ್ಟಣದ ಹುಡುಗೆಯರೆ ? ಅವರ ಚರಣಾರವಿಂದಗಳಿಗೆ ಕೋಟ್ಯಾನು ಕೋಟಿ ಪ್ರಣಾಮ!' ಎಂದು ತಾಯಿಯು ತನ್ನ ಎರಡೂ ಕೈಗಳನ್ನು ಜೋಡಿಸಿ ಹಣೆಗೆ ಹಚ್ಚಿಕೊಂಡಳು.

ವಿಜಯ ನಕ್ಕ. ತಾಯಿಯೆಂದಳು 'ನಗುವೆಯೇಕೊ? ನನ್ನ ದುಃಖ ನನಗೇ ಗೊತ್ತು. ಅವರೊಬ್ಬರಿಗೇ ಗೊತ್ತು!' ಹೀಗೆನ್ನುವಾಗ ಆಕೆಯ ಕಣ್ಣುಗಳಿಂದ ನೀರು ಬಳಬಳ ಹರಿಯತೊಡಗಿದವು. ಆಕೆಯೆಂದಳು 'ನಾವಿದ್ದ ಹಳ್ಳಿಗಳು ಈಗ ಆಗಿನಂತೆಯೇ ಇರುವುವೇನು ಮಗೂ? ಕಾಲವು ತೀರ ಬದಲಾಗಿ ಹೋಗಿದೆ.'

'ಕಾಲವು ಬಹಳ ಬದಲಾಗಿದೆ; ಆದರೆ ನೀವು ಬದುಕಿರುವ ವರೆಗೂ ನಿಮ್ಮ ಪುಣ್ಯದಿಂದ ಅವೂ ಇರುವವು, ಆ ಹಳ್ಳಿಗಳ ಒಂದು ಇನಿತು ದಿವ್ಯ ದರ್ಶನ ಮಾಡಿಕೊಂಡು ಬಂದಿರುವೆನಮ್ಮಾ. ಆದರೆ ನಿನಗೆ ಅದನ್ನು ತೋರಿಸುವುದು ಸ್ವಲ್ಪ ಕಷ್ಟ ಎಂಬುದೊಂದೇ ದುಃಖವು ಮನದಲ್ಲಿ ಉಳಿದುಕೊಂಡಿದೆ' ಎಂದು ವಿಜಯ ಆಫೀಸಿಗೆ ಹೊರಟ. ಆಫೀಸಿನ ಕೆಲಸವೇ ಅವನನ್ನು ಇಲ್ಲಿಯ ವರೆಗೆ ಬರಮಾಡಿಕೊಂಡಿದ್ದಿತು.

*　　*　　*　　*　　*　　*

ಸಾಯಂಕಾಲ ಆಫೀಸಿನಿಂದ ತಿರುಗಿಬಂದು ವಿಜಯ ಅತ್ತಿಗೆ ಅಣ್ಣಂದಿರನ್ನು ಭೆಟ್ಟಿಯಾಗಲು ಹೋದ. ಅಲ್ಲಿ ಕುರುಕ್ಷೇತ್ರವು ನಡೆದುದನ್ನು ನೋಡಿದ. ಶೃಂಗಾರದ ವಸ್ತುಗಳು ಅತ್ತಿತ್ತ ಅಸ್ತವ್ಯಸ್ತವಾಗಿ ಹರಡಿ ಬಿದ್ದಿರುವವು. ಅಣ್ಣ ಆರಾಮ ಕುರ್ಚಿಯ ಕೈಯ ಮೇಲೆ ಕುಳಿತು ಗಟ್ಟಿಯಾಗಿ ಮಾತಾಡುತ್ತಿರುವ 'ಇಲ್ಲ, ಎಂದೂ ಇಲ್ಲ! ಬೇಕಾಗಿದ್ದರೆ ನೀನೊಬ್ಬಳೇ ಹೋಗು. ಇಂತಹ ನೆಂಟಸ್ತಿಗೆ ನಾನು....' ಇತ್ಯಾದಿ ಇತ್ಯಾದಿ. ಅಕಸ್ಮಾತ್ ವಿಜಯನನ್ನು ನೋಡುತ್ತಲೇ ಪ್ರಭಾ ಒಮ್ಮೆಗೇ ಅಳತೊಡಗಿಳು. ಅಳುತ್ತ ಅಳುತ್ತ 'ಒಳ್ಳೇದು ವಿಜಯಣ್ಣಾ, ನೀನೇ ಹೇಳು – ಅವರು ಸೀತಾಂಶುವಿನೊಡನೆ ಅನೀತಾಳ ವಿವಾಹವನ್ನು ನಿಶ್ಚಯಿಸಿದರೆ ನನ್ನದೇನು ತಪ್ಪು? ಇವೊತ್ತು ಮದುವೆಯ ನಿಶ್ಚಯವಾಗುತಕ್ಕದಿದೆ. ಇವರು ತಾವು ಬರುವುದಿಲ್ಲ ಎಂದು ಹೇಳುತ್ತಿರುವರು. ಇದರರ್ಥ ನಾನೂ ಹೋಗಬಾರದು ಎಂದಲ್ಲವೆ?' ಎಂದಳು.

ಅಣ್ಣ ಗರ್ಜಿಸಿದ 'ನೀನು ಏನು ಹೇಳಬೇಕೆನ್ನುವೆ? ನಿನಗೆ ಗೊತ್ತಿರಲಿಲ್ಲವೇನು? ಇಷ್ಟು ದಿನಗಳ ವರೆಗೆ ನಮ್ಮ ಕೂಡ ಇಷ್ಟು ಒಳಸಂಚನ್ನು ಏಕೆ ನಡೆಸಬೇಕಾಗಿತ್ತು?'

ನಡೆದ ಸಂಗತಿಯೇನೆಂಬುದು ವಿಜಯನಿಗೆ ತಿಳಿಯದಾಯಿತು. ಅವನು ದಿಙ್ಮೂಢನಾದ. ಆದರೆ ತಿಳಿದುಕೊಳ್ಳಲು ವೇಳೆಯು ಹತ್ತಲಿಲ್ಲ. ಅವನೆಂದ 'ತಡೆ, ತಡೆ. ಏನಾಯಿತು ಹೇಳು? ಅನೀತೆಯ ವಿವಾಹ ಸೀತಾಂಶು ಘೋಷಾಲನ ಕೂಡ ಆಗಬೇಕೆಂದು ನಿಶ್ಚಯವಾಗಿರುವುದು, ಇದೇ ಅಲ್ಲವೆ? ಇಂದೇ ಮಾತು ನಿಶ್ಚಿತವಾಗುವುದಿದೆಯೇನು? I am thrown completely over-board!' (ನಾನು ಸಂಪೂರ್ಣವಾಗಿ ಸಮುದ್ರದಲ್ಲಿಬೀಸಾಡಲ್ಪಟ್ಟನೇ!)'

ಅಣ್ಣ ಹುಂಕಾರ ಮಾಡುತ್ತಾ 'ಹೂಂ! ಮತ್ತು ಈಕೆಯೆನ್ನುತ್ತಾಳೆ ತನಗೇನೂ ಗೊತ್ತಿಲ್ಲವಂತೆ!' ಎಂದ.

ಪ್ರಭಾ ಅಳುತ್ತ ''ನಾನೇನು ಮಾಡಬಲ್ಲೆ ವಿಜಯಣ್ಣ? ಅಣ್ಣ ಇರುವ ಅವ್ವ ಇರುವಳು, ಹುಡುಗೆಯು ಸ್ವತಃ ಪ್ರೌಢೆಯಾಗಿರುವಳು—ಅವರು ವಚನ ಭಂಗ ಮಾಡಿದರೆ ಅವರಲ್ಲಿ ನನ್ನದೇನು ದೋಷ?' ಎಂದಳು.

ಅಣ್ಣನೆಂದ 'ದೋಷವೆನೆಂದರೆ ಅವರು ಮೋಸಗಾರರು, ನಾಸ್ತಿಕರು, ಸುಳ್ಳು ಆಡುವವರು. ಒಂದು ಕಡೆಗೆ ವಚನ ಕೊಟ್ಟು ಬೇರೆ ಕಡೆಗೆ ಜಾಲವನ್ನು ಪಸರಿಸುತ್ತಿರುವರು. ಇನ್ನು ಜನರು ನಗುವರು, ಪಿಸುಮಾತನಾಡುವರು, ಕ್ಲಬ್ಬಿನಲ್ಲಿ ನಾಚಿಕೆಯಿಂದ ನಾನು ಮುಖವನ್ನು ತೋರಿಸುವಂತಿಲ್ಲ.'

ಪ್ರಭಾ ಅದೇ ಅಳುದನಿಯಲ್ಲಿ ಎನ್ನತೊಡಗಿದಳು 'ಹೀಗೆಲ್ಲಾದರೂ ಆಗುವುದಿಲ್ಲವೇ? ಇದರಲ್ಲಿ ನಾಚಿಕೆಪಟ್ಟುಕೊಳ್ಳುವಂತಹದೇನಿದೆ?'

'ನಾನು ನಾಚಿಕೆಪಡಬೇಕಾದುದರ ಕಾರಣವೇನೆಂದರೆ ಆಕೆ ನಿನ್ನ ತಂಗಿ ಮೇಲಾಗಿ ನನ್ನ ಮಾವನ ಮನೆಯವರೆಲ್ಲರೂ ಮೋಸಗಾರರು, ಆದಕ್ಕೋಸ್ಕರ! ಇದರಲ್ಲಿ ನಿನ್ನ ಕೈಯೂ ಇರುವುದು, ಆದಕ್ಕೋಸ್ಕರ!'

ಈಗಂತೂ ವಿಜಯ ಅಣ್ಣನ ಮುಖವನ್ನು ನೋಡಿ ನಕ್ಕುಬಿಟ್ಟ. ಮತ್ತು ಅದೇ ವೇಳೆಗೆ ತಲೆಬಾಗಿ ಅತ್ತಿಗೆಯ ಪಾದಧೂಳಿಯನ್ನು ಹಣೆಗೆ ಹಚ್ಚಿಕೊಂಡು ಪ್ರಸನ್ನತೆಯಿಂದ 'ಅತ್ತಿಗೆ ಅಣ್ಣ ಬೇಕಾದಷ್ಟು ಗರ್ಜಿಸಲಿ, ನನಗಂತೂ ಇದರಿಂದ ಸಿಟ್ಟಿಲ್ಲ, ಅಸಮಾಧಾನವೂ ಇಲ್ಲ. ನಿಜವಾಗಿಯೂ ಇದರಲ್ಲಿ ನಿನ್ನ ಕೈ ಇದ್ದರೆ ನಾನು ನಿನಗೆ ಚಿರಋಣಿ' ಎಂದ.

ಬಳಿಕ ಅಣ್ಣನ ಕಡೆಗೆ ತಿರುಗಿ ವಿಜಯ ಎಂದ 'ಅಣ್ಣ ನೀನು

ಗೋಪಿಸಿಕೊಳ್ಳುವುದು ಸರಿಯಲ್ಲ. ಈ ವಿಷಯದಲ್ಲಿ ಅದನ್ನೂ ತಿರುಗಿಸಲು ಬರುತ್ತಿದ್ದರೆ ವಚನ ದಾನಕ್ಕೆ ಯಾವ ಬೆಲೆಯೂ ಇರುವುದಿಲ್ಲ. ಮದುವೆಯು ಮಕ್ಕಳಾಟವಲ್ಲ. ಶೀತಾಂಶು ವಿಲಾಯತಿಯಿಂದ ಆಯ್. ಸಿ. ಎಸ್. ಪಾಸಾಗಿ ಬಂದಿರುವ; ಉಚ್ಚ ತರಗತಿಯ ಮನುಷ್ಯ. ಅನೀತಾ ನೋಡಲು ಲಾವಣ್ಯವತಿ, ಬಿ ಎ ಪಾಸ್. ನಾನು ? ಇಲ್ಲಿಯೂ ಪಾಸಾಗಲಿಲ್ಲ, ವಿಲಾಯತಿಯಲ್ಲಿ ಏಳೆಂಟು ವರ್ಷ ಕಳೆದರೂ ಯಾವ ಡಿಗ್ರಿಯನ್ನೂ ಸಂಪಾದಿಸಲಿಲ್ಲ. ಈಗ ಕಟ್ಟಿಗೆ ಅಂಗಡಿಯಲ್ಲಿ ಕುಳಿತು ಕಟ್ಟಿಗೆ ಮಾರಿ ನಿರ್ವಾಹ ಮಾಡುತ್ತಿರುವೆ, ನನಗೆ ಸ್ಥಾನಮಾನವಿಲ್ಲ—ಡಿಗ್ರಿಯ ಗೌರವ ಇಲ್ಲ, ಯಾವ ಪದವಿಯೂ ಇಲ್ಲ. ಇದರಲ್ಲಿ ಅನಿತೆಯ ದೋಷವೇನೂ ಇಲ್ಲ ಅಣ್ಣ !'

ಅಣ್ಣ ಕೋಪದಿಂದ 'ಅನಂತ ಅಪರಾಧ, ದೋಷಕ್ಕೆ ಅವಳು ಪಾತ್ರಳು ನಿನಗೆ ಇನಿತೂ ದು:ಖವಾಗಿಲ್ಲವೆಂದು ಹೇಳುವೆಯಾ?' ಎಂದು ವಿಜಯ ಉತ್ತರವಿತ್ತ 'ಅಣ್ಣ, ನೀನು ಹಿರಿಯ, ಪೂಜ್ಯ. ನಿನಗೆ ನಾನು ಸುಳ್ಳು ಹೇಳಲಾರೆ ನಿನ್ನ ಪಾದ ಮುಟ್ಟಿ ಹೇಳುವೆ—ನನಗೆ ಇನಿತೂ ದುಃಖವಿಲ್ಲ. ನನ್ನ ಪುಣ್ಯದಿಂದಲ್ಲ, ಯಾರದೋ ಪುಣ್ಯಪ್ರಭಾವದಿಂದ ನಾನು ಪಾರಾದೆ, ಉಳಿದುಕೊಂಡೆ ಎಂದು ಎನಿಸುತ್ತಿರುವುದು. ಅತ್ತಿಗೆ, ನಡೆ, ನಾನು ನಿನ್ನನ್ನು ಕರೆದುಕೊಂಡು ಹೋಗುವೆ. ಅಣ್ಣ ಸಿಟ್ಟಾಗಿ ಮನೆಯಲ್ಲಿರಲು ಬಯಸಿದರೆ ಇರಲಿ. ನಾನೂ ನೀನೂ ಹೋಗೋಣ ನಡೆ. ನಿನ್ನ ತಂಗಿಯ ನಿಶ್ಚಯದ ಆನಂದದ ದಿನ ಹೊಟ್ಟೆತುಂಬ ಉಂಡು ಬರೋಣ.'

ಪ್ರಭಾ 'ನೀವು ನನ್ನ ಚೇಷ್ಟೆ ಮಾಡುತ್ತಿರುವೆ ವಿಜಯಣ್ಣ ಎಂದಳು.'

'ಇಲ್ಲ ಅತ್ತಿಗೇ, ಇಲ್ಲ. ಈ ದಿನ ನಿನ್ನ ಹೃತ್ಪೂರ್ವಕ ಆಶೀರ್ವಾದವನ್ನು ಬಯಸುವೆ— ನಿನ್ನ ವರದಿಂದ ನನ್ನ ಭಾಗ್ಯ ಪುನಃ ತೆರೆದು ಬೆಳಗಲಿ. ಆದರೆ ಇನ್ನು ತಡಮಾಡಬೇಡ—ನೀನು ಹೊಸಸೀರೆ ಉಟ್ಟುಕೊ, ನಾನೂ ಆಫೀಸಿನ ಬಟ್ಟೆ ಕಳೆದು ಬೇರೆ ಬಟ್ಟೆ ಹಾಕಿಕೊಂಡು ಬರುವೆ' ಎಂದು ವಿಜಯ ಬೇಗ ಹೋಗಬಯಸುತ್ತಿದ್ದ, ಇಷ್ಟರಲ್ಲಿ ಅಣ್ಣ ಎಂದ 'ನಿನಗೆ ಆಮಂತ್ರಣವಿಲ್ಲ, ನೀನು ಅಲ್ಲಿಗೆ ಹೇಗೆ ಹೋಗುವೆ ?'

ವಿಜಯ ತಡವರಿಸಿ ನಿಂತು ನುಡಿದ 'ನಿಜ. ನಾನು ಹೋದರೆ ಅವರಿಗೆ

ನಾಚಿಕೆ ಬರುವುದು. ಆದರೆ ಈ ದಿನ ಕರೆಯದಿದ್ದರೂ ಹೋಗಲು ನನಗೆ ಸಂಕೋಚವೆನಿಸುವುದಿಲ್ಲ, ಅದೇಕೊ ಏನೊ, ಅಲ್ಲಿಗೆ ಓಡಿಹೋಗಿ ಅನೀತಾ, ನೀನು ನನಗೆ ಮೋಸ ಮಾಡದಾದೆ, ನಿನ್ನ ಮೇಲೆ ನನಗೆ ಸಿಟ್ಟಿಲ್ಲ, ನಿನ್ನ ಬಗ್ಗೆ ಹೊಟ್ಟೆಕಿಚ್ಚು ಇಲ್ಲ. ನೀನು ಸುಖಿಯಾಗಿರಬೇಕೆಂದು ಬಯಸುವೆ ಎಂದು ಹೇಳಬೇಕೆಂದಿನಿಸುತ್ತಿರುವುದು. ಅಣ್ಣಾ, ನನ್ನ ಬಿನ್ನಹ ಮನ್ನಿಸು, ಕೋಪಿಸಿ ಕೊಳ್ಳಬೇಡ, ಅತ್ತಿಗೆಯನ್ನು ಕರೆದುಕೊಂಡು ಹೋಗಿ ಅನಿತೆಗೆ ಆಶೀರ್ವಾದ ಮಾಡಿ ಬನ್ನಿರಿ '

ಅಣ್ಣಾ ಅತ್ತಿಗೆಯರು ಇಬ್ಬರೂ ಹತಬುದ್ಧಿಯುವರಾಗಿ ಅವನ ಮುಖ ನೋಡುತ್ತ ನಿಂತರು. ಇಬ್ಬರ ದೃಷ್ಟಿಗಳೂ ವಿಜಯನ ಮುಖದ ಮೇಲೆ ಒಮ್ಮೆಗೆ ಬಿದ್ದವು—ಅವನ ಮುಖದ ಮೇಲೆ ವ್ಯಂಗ್ಯದ ಚಿಹ್ನವೆಷ್ಟೂ ಇರಲಿಲ್ಲ. ಕ್ರೋಧ ಅಥವಾ ಅಭಿಮಾನದ ಛಾಯೆಯೂ ಇರಲಿಲ್ಲ ನಿಜವಾಗಿಯೂ ಒಂದು ಗಂಡಾಂತರದಿಂದ ಪಾರಾದುದರಿಂದ ಅವನ ಹೃದಯವು ಪುಳಕಿತ ವಾಗಿರುವಂತೆ ಕಾಣುತ್ತಿದ್ದಿತು. ಪ್ರಭಾ ಅನೀತೆಯ ಅಕ್ಕ, ತಂಗಿಯ ಬಗ್ಗೆ ಆಡಿದ ಈ ಮಾತುಗಳು ಅವಳ ಹೃದಯವನ್ನು ತಿವಿದವು, ಅವಳಿಗೆ ತಾವು ಮಾಡಿದುದು ಸರಿಯಲ್ಲವೆಂದೆನಿಸಿತು, ತಂಗಿಯು ತನಗೇ ಅಪಮಾನ ಮಾಡಿ ದಂತಾಯಿತೆಂದು ಅವಳ ಹೃದಯವು ನಡುಗಿತು ಆಕೆಯು ಏನನ್ನೊ ಹೇಳ ಬೇಕೆಂದಿದ್ದಳು, ಆದರೆ ಕಂಠವು ಬಿಗಿದು ಬಂದಿತು,

ವಿಜಯನೆಂದ 'ಅತ್ತಿಗೆ, ನನ್ನ ಎಲ್ಲ ಮಾತುಗಳನ್ನು ಹೇಳುವ ಹೊತ್ತು ಇನ್ನೂ ಬಂದಿಲ್ಲ. ಅದೆಂದು ಬರುವುದೊ ಇನ್ನೂ ಗೊತ್ತಿಲ್ಲ. ಆದರೆ ಎಂದಾ ದರೂ ಒಂದು ದಿನ ಬಂದರೆ ಹೇಳುವೆ. ಆ ದಿನ ನೀನು ಎನ್ನುವೆ 'ವಿಜಯ, ನೀನು ಭಾಗ್ಯಶಾಲಿ, ನಿನ್ನನ್ನು ನಾನು ಆಶೀರ್ವದಿಸುವೆ' ಎಂದು.

